ರಾಷ್ಟ್ರೀಯ ಜೀವನ ಚರಿತ್ರಮಾಲೆ

# ಶಂಕರಾಚಾರ್ಯ

ಟಿ. ಎಂ. ಪಿ. ಮಹಾದೇವನ್

ಅನುವಾದ
ಜಿ. ವೆಂಕಟಸುಬ್ಬಯ್ಯ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ಪರಿವಿಡಿ

# 1. ಜನನ ಮತ್ತು ಬಾಲ್ಯ

ಶಂಕರರು ಜನಿಸಿದ ಕಾಲ ನಮ್ಮ ಕಾಲಕ್ಕಿಂತ ಬೇರೆಯಾಗಿರಲಿಲ್ಲ. ಅದು ಆಧ್ಯಾತ್ಮಿಕ ಮತ್ತು ಸಾಮಾಜಿಕ ತಾರತಮ್ಯಗಳ ಯುಗವಾಗಿತ್ತು. ದೇಶದ ಅವ್ಯವಸ್ಥೆಯನ್ನು ಶಂಕರರು ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ ಹೀಗೆ ವಿವರಿಸಿದ್ದಾರೆ: ಂಈಗಿನವರು ಹೇಗೆ ದೇವತೆಗಳೊಡನೆ ಮಾತನಾಡಲಾರರೋ ಹಾಗೆಯೇ ಹಿಂದಿನವರೂ ಮಾತನಾಡಲಾರರಾಗಿದ್ದರು ಎಂದು ವಾದಿಸುವವರು ಈಗ ಯಾವ ಸಾರ್ವಭೌಮನೂ ಇಲ್ಲದಿರುವುದರಿಂದ ಹಿಂದಿನ ಕಾಲದಲ್ಲಿಯೂ ಯಾವ ಸಾರ್ವಭೌಮರೂ ಇರಲಿಲ್ಲವೆಂದೂ ವಾದಿಸಬಹುದು. ಅಥವಾ ಈಗಿರುವಂತೆಯೇ ಹಿಂದೆಯೂ ಬೇರೆ ಬೇರೆ ವರ್ಗದ, ಸ್ಥಾನದ ಜನರಿಗೆ ಸಂಬಂಧಿಸಿದ ವೃತ್ತಿಕರ್ತವ್ಯಗಳೂ ಅವ್ಯವಸ್ಥೆಯಿಂದ ಕೂಡಿದ್ದವು ಎಂದೂ ವಾದಿಸಬಹುದು.ಂ ಶಂಕರರ ಕಾಲದಲ್ಲಿ ಭಾರತವು ರಾಜಕೀಯವಾಗಿ ಹಂಚಿಹೋಗಿತ್ತು. ಸಾಮಾಜಿಕವಾಗಿಅಸ್ತವ್ಯಸ್ತವಾಗಿತ್ತು. ಪರಸ್ಪರ ಸಾಮ್ಯವೇನೂ ಇಲ್ಲದ ಅನೇಕ ರಾಜ್ಯಗಳು ತಮ್ಮತಮ್ಮಲ್ಲಿಯೇ ಅಧಿಕಾರಕ್ಕಾಗಿ ಸ್ಪರ್ಧೆಮಾಡುತ್ತಿದ್ದುವು. ದ್ವೇಷದಿಂದ ದ್ವೇಷ ಹುಟ್ಟುತ್ತಿತ್ತು. ಮತ್ತು ಸ್ವಾರ್ಥದ, ದುರಾಸೆಯ ಮಾರಿಗೆ ಶಾಂತಿಯನ್ನು ಬಲಿಕೊಟ್ಟಾಗಿತ್ತು. ಒಂದು ಕಡೆ ವೇದಗಳ ಅಂತರಂಗವನ್ನು ಮರೆತು ಅವುಗಳ ಶಬ್ದಕ್ಕೆ ಅಂಟಿಬಿದ್ದಿದ್ದ ಶಬ್ದಾರ್ಥವಾದಿಗಳೂ ಕರ್ಮವಾದಿಗಳೂ ಇದ್ದರು. ಮತ್ತೊಂದು ಕಡೆ ಪವಿತ್ರವಾದ, ಪ್ರಾಚೀನವಾದ ಎಲ್ಲವನ್ನೂ ನಾಶಮಾಡಲು ಹೊರಟಿದ್ದ ನಾಸ್ತಿಕರೂ ಸಾಕಾರವಾದಿಗಳೂ ಇದ್ದರು. ಬೇರೆ ಬೇರೆ ದರ್ಶನಗಳ ಪ್ರತಿಪಾದಕರಲ್ಲಿ ಕಚ್ಚಾಟ ಸಾಮಾನ್ಯವಾಗಿತ್ತು; ಬೇರೆ ಬೇರೆ ಮತಾನುಯಾಯಿಗಳಲ್ಲಿ ದ್ವೇಷ ಮೂಡಿತ್ತು. 'ಏಕಂ ಸತ್' ಎಂಬ ವೈದಿಕಬೋಧನೆಯ ಮೂಲವನ್ನೇ ವಿದ್ವಾಂಸರೂ ಸಾಮಾನ್ಯರೂ ಮರೆತಂತಿತ್ತು. ಬೇರೆ ಬೇರೆ ನಂಬಿಕೆಗಳ ಮುಂದಾಳುಗಳೂ ಅವರ ಅನಯಯಾಯಿಗಳೂ ಮತವನ್ನು ಬಾಳಿನ ಶಾಂತಿ ಸಮಾಧಾನಗಳಿಗೆ ಉಪಯೋಗಿಸುವುದರ ಬದಲು ಆಕ್ರಮಣದ ಸಾಧನವನ್ನಾಗಿ ಮಾಡಿಕೊಂಡರು.

ಇಂಥ ಬಿಕ್ಕಟ್ಟಿನ ಗೊಂದಲದ ಸಮಯದಲ್ಲಿ ಶಂಕರರು ಜನ್ಮ ತಳೆದರು. ಅವರು ತಮ್ಮ ಅತ್ಯಲ್ಪ ಕಾಲದ ಆಯುಸ್ಸನ್ನು, ಮಾನವ ಹೃದಯದ ಮತ್ತು ಮನಸ್ಸಿನ ಗಾಯಗಳನ್ನು ವಾಸಿಮಾಡುತ್ತಾ, ಆಧ್ಯಾತ್ಮಿಕ, ಆರೋಗ್ಯ, ವಿವೇಕಗಳ

ಹಾದಿಯನ್ನು ತೋರಿಸುತ್ತಾ ಕಳೆದರು. ಸಮಾಜದ ಸತ್ವವನ್ನೇ ತಿಂದುಹಾಕುತ್ತಿದ್ದ ರೋಗದ ಮೂಲ ಅನೈಕ್ಯದಲ್ಲಿ ಅಡಗಿದೆಯೆಂಬುದನ್ನು ಅವರು ಬೇಗ ಕಂಡುಹಿಡಿದರು. ಅದನ್ನು ಪರಿಹರಿಸಬಹುದಾಗಿದ್ದ ಏಕೈಕ ಚಿಕಿತ್ಸೋಪಾಯವಾದ ಏಕತೆಯ ಜ್ಞಾನವನ್ನೂ, ಉಪನಿಷತ್ತಿನ ಅದ್ವೈತ ದರ್ಶನವನ್ನೂ ಅವರು ಬೋಧಿಸಿದರು. ಸರ್ವಕಾಲಕ್ಕೂ ಸಮರ್ಥವಾದ ಈ ಚಿಕಿತ್ಸೆಯು ಶಂಕರರ ಕಾಲಕ್ಕೆ ವಿಶೇಷವಾಗಿ ಹೊಂದಿಕೊಂಡಿತು. ನಮ್ಮ ಕಾಲದಲ್ಲಿಯೂ ಅದು ಸಮಯೋಚಿತವಾದುದಾಗಿದೆ.

ಶಿವ (ಅಂದರೆ ಮಂಗಳ) ನೇ ತನ್ನ ಅವತಾರಕ್ಕೆ ಕಾಲ, ದೇಶ, ಕುಟುಂಬಗಳನ್ನು ಆರಿಸಿಕೊಂಡಂತಿತ್ತು. ಕಾಲಟಿ[1]ಯೆಂಬುದು ಕೇರಳದಲ್ಲಿ ಚೂರ್ಣಾ ನದಿಯ ದಡದಲ್ಲಿರುವ ಒಂದು ಶಾಂತವಾದ ಗ್ರಾಮ. (ಆ ನದಿಯನ್ನು ಪೂರ್ಣಾ, ಆಲ್ವೆ, ಪೆರಿಯಾರು ಎಂದೂ ಕರೆಯುತ್ತಾರೆ.) ಅದು 'ಆಲ್ವೆ'[2] ಊರಿನಿಂದ ಸುಮಾರು ಆರು ಮೈಲಿ ದೂರದಲ್ಲಿದೆ. ವಾರಣಾಸಿಯ ತಾರಕ ಮಠದ ಪುಸ್ತಕಭಂಡಾರದಲ್ಲಿರುವ ಆನಂದಗಿರಿ ರಚಿತ 'ಶಂಕರ ವಿಜಯ' ಗ್ರಂಥದ ಪ್ರಾಚೀನ ಹಸ್ತಪ್ರತಿಯಲ್ಲಿ ಕಾಲಟಿಯನ್ನು ಸುಂದರವಾದ ಗ್ರಾಮವೆಂದೂ ಕೇರಳಕ್ಕೆ ಭೂಷಣಪ್ರಾಯವೆಂದೂ ವರ್ಣಿಸಲಾಗಿದೆ. ಇಂಥ ಗ್ರಾಮದಲ್ಲಿ ಶಿವಗುರು[3] ಮತ್ತು ಆರ್ಯಾಂಬಾ ಎಂಬ ದೈವಭಕ್ತರಾದ ನಂಬೂದ್ರಿ ದಂಪತಿಗಳು ವಾಸಿಸುತ್ತಿದ್ದರು. ಇತ್ತೀಚಿನವರೆಗೂ ವೈದಿಕ ಸಂಸ್ಕೃತಿಯನ್ನು ಉತ್ತಮವಾಗಿ ರಕ್ಷಿಸಿ, ಉಳಿಸಿಕೊಂಡು ಬಂದವರು ಕೇರಳದ ಈ ನಂಬೂದ್ರಿಗಳೇ. ನಂಬೂದ್ರಿಗಳಲ್ಲಿ ಬಹುಶಃ ಎಲ್ಲ ಬಾಲಕರೂ ವೇದಪಠಣದಲ್ಲಿಯೂ ವೇದಾಭ್ಯಾಸದಲ್ಲಿಯೂ ಆಳವಾದ ಅಭ್ಯಾಸವನ್ನು ಪಡೆಯುತ್ತಿದ್ದರು. ಮಕ್ಕಳನ್ನು ಆಧುನಿಕ ಶಿಕ್ಷಣ ಸಂಸ್ಥೆಗಳಿಗೆ ಕಳುಹಿಸಲು ಇಚ್ಛಿಸುತ್ತಿದ್ದವರು ಮಕ್ಕಳಿಗೆ ಈ ಮೂಲ ಶಿಕ್ಷಣ ದೊರೆತನಂತರವೇ ಕಳುಹಿಸುತ್ತಿದ್ದರು.

---

1.ಶಿವರಹಸ್ಯದಲ್ಲಿ ಗ್ರಾಮದ ಹೆಸರು 'ಸಸಾಲ' ಎಂದಿದೆ.

2.ಪೆರಿಯಾರ್ ನದಿಯ ಅಣೆಕಟ್ಟು ಕಟ್ಟಿದಮೇಲೆ ಮಧುರೆ ಜಿಲ್ಲೆಯ ಪೂರ್ವ ಪ್ರದೇಶಕ್ಕೆಲ್ಲ ಅದು ನೀರೊದಗಿಸುತ್ತಿದೆ. ಪ್ರಾಚೀನ ತಮಿಳು ಸಾಹಿತ್ಯದಲ್ಲಿ ಈ ಪ್ರದೇಶಕ್ಕೆ 'ಅಳವೆ' ಎಂಬ ಹೆಸರು ಪ್ರಸಿದ್ಧ.

3.'ಶಿವಗುರು' ಎಂಬ ಹೆಸರು ಕೇರಳದಲ್ಲಂತೂ ಅಪರೂಪವಾದುದು. ಶಂಕರರು ಶಿವನ ಅವತಾರವೆಂದು ಗಣಿಸುತ್ತಿದ್ದುದರಿಂದ, ಶಂಕರರ ಜನನವಾದ ಮೇಲೆ ಅವರ ತಂದೆಯ ಅವಸಾನಾನಂತರ ಅವರನ್ನು 'ಶಿವಗುರು' ಎಂದು ಕರೆದಿರಬಹುದೆಂದು ಊಹಿಸಬಹುದು. ಈ ಸಂದರ್ಭದಲ್ಲಿ ಪರಿಶೀಲಿಸಬಹುದಾದ ಮತ್ತೊಂದು ಅಂಶವು ಈ ಹೆಸರಿಗೆ ಬೇರೊಂದು ಅರ್ಥವಿವರಣೆ ನೀಡುತ್ತದೆ. ಶಿವಗುರು ಅಥವಾ ಶಿವಗುರುನಾಥ ಎಂಬ ಹೆಸರು ಕುಂಭಕೋಣದ ಸುತ್ತಮುತ್ತಲಿನಲ್ಲಿ ಮಾತ್ರ ಪ್ರಚಾರದಲ್ಲಿದೆ. ನಮ್ಮ ದೇಶದ ಮತ್ತಾವ ಕಡೆಯಲ್ಲೂ ಇಲ್ಲ. ಸಾಮಾನ್ಯವಾಗಿ ಮನೆಯಲ್ಲಿ ಮಕ್ಕಳಿಗೆ ಯಾವುದಾದರೊಂದು ದೇವತೆಯ ಹೆಸರಿಡುತ್ತಾರೆ; ಅಥವಾ ಮನೆದೇವತೆಯ ಹೆಸರಿಡುತ್ತಾರೆ. ಪರಶುರಾಮ ಕ್ಷೇತ್ರವೆಂದು ಪ್ರಸಿದ್ಧವಾದ ಕೇರಳದಲ್ಲಿ

ಶಂಕರರು ಜನಿಸಿದ ಕಾಲದಲ್ಲಿ ವೈದಿಕ ಜ್ಞಾನವನ್ನೂ ಭಕ್ತಿಯನ್ನೂ ರಕ್ಷಿಸಿ ವೃದ್ಧಿಪಡಿಸುತ್ತಿದ್ದವರಲ್ಲಿ ಇವರೇ ಬಹುಮುಖ್ಯರಾದವರೆಂಬುದನ್ನು ಹೇಳಬೇಕಾಗಿಲ್ಲ. ಶಂಕರರಿಗೆ ತಂದೆ ತಾಯಿಗಳಾಗಲಿದ್ದ ಶಿವಗುರು ಮತ್ತು ಆರ್ಯಾಂಬಾ ಎಂಬಿಬ್ಬರೂ ಶ್ರೀಮಂತರಾದರೂ ಗಾಢ ದೈವಭಕ್ತಿಯುಳ್ಳ ನಂಬೂದ್ರಿ ಕುಟುಂಬಗಳಲ್ಲಿ ಹುಟ್ಟಿ ಬೆಳೆದವರು. ಶಿವಗುರುವಿನ ತಂದೆ ವಿದ್ಯಾಧಿರಾಜ[1] ಮತ್ತು ಆರ್ಯಾಂಬೆಯ ತಂದೆ ಮಾಘಪಂಡಿತ. ಶಿವಗುರುವನ್ನು ಸಕಾಲದಲ್ಲಿ ಗುರುಕುಲಕ್ಕೆ ಕಳುಹಿಸಿದರು. ಅವನಿಗೆ ಸಂಸಾರಜೀವನದಲ್ಲಿ ಆಸಕ್ತಿಯಿಲ್ಲವೆಂಬುದು ವ್ಯಾಸಂಗ ಪೂರೈಸುವ ವೇಳೆಗೆ ಸ್ಪಷ್ಟವಾಯಿತು. ಆಧ್ಯಾತ್ಮಿಕ ವಿಷಯಗಳನ್ನು ಅಭ್ಯಾಸಮಾಡಿ ಅವುಗಳನ್ನು ಅನುಸರಿಸುವುದಕ್ಕೆ ತನ್ನ ಬಾಳನ್ನು ಮೀಸಲಾಗಿಡಬೇಕೆಂದು ಅವನು ಬಯಸಿದನು. ಆದರೆ ಅವನು ಮನೆಗೆ ಹಿಂದಿರುಗಿದಾಗ ಅವನ ತಂದೆ ತಾಯಿಗಳು ಅವನನ್ನು ಮದುವೆಗೆ ಒಪ್ಪಿಸಿದರು. ಆರ್ಯಾಂಬೆಯನ್ನು ಅವನ ವಧುವಾಗಿ ಆರಿಸಿದರು. ವಿವಾಹವಾದಮೇಲೆ ಈ ಅನ್ಯೋನ್ಯ ದಂಪತಿಗಳು ಶಾಸ್ತ್ರವಿಧಿಗಳನ್ನು ಮಾಡುತ್ತಾ, ಬೇಡಿದವರಿಗೆ ಸಹಾಯವನ್ನು ನೀಡುತ್ತಾ ಸಂಸಾರಿಗರಿಗೆ ಮೇಲ್ಪಂಕ್ತಿಯಾಗಿ ಬಾಳಿದರು.

ಶಿವಗುರು ಆರ್ಯಾಂಬೆಯರಿಗೆ ಬಾಳಿನ ಒಳಿತುಗಳಾದುವೆಲ್ಲ – ಸದ್ಗುಣ, ಐಶ್ವರ್ಯ, ಪಾಂಡಿತ್ಯ, ವಿನಯ, ವಿಶಾಲಹೃದಯ, ಔದಾರ್ಯ – ಇವುಗಳೆಲ್ಲ

ಒಂದು ಪುರಾಣ ಕಥೆಯಿದೆ. ಅದರ ಪ್ರಕಾರ ಪರಶುರಾಮನು ಪಶ್ಚಿಮ ಸಮುದ್ರದಿಂದ ಸ್ವಲ್ಪ ಭಾಗ ಭೂಮಿಯನ್ನು ಆಕ್ರಮಿಸಿಕೊಂಡಮೇಲೆ ಅಲ್ಲಿಗೆ ಪೂರ್ವ ಸಮುದ್ರತೀರದಿಂದ ಕೆಲವರು ಬ್ರಾಹ್ಮಣರನ್ನು ಕರೆತಂದು ವಲಸೆ ಹೂಡಿದನೆಂದು ತಿಳಿಯುತ್ತದೆ. ಇಂಗ್ಲೆಂಡಿನಿಂದ ಹೊರಟ 'ಪಿಲ್‌ಗ್ರಿಮ್ ಫಾದರ್ಸ್' ಎಂಬ ಹೆಸರಿನ ವಲಸೆಗಾರರು ತಾವು ಅಮೆರಿಕದಲ್ಲಿ ನೆಲೆನಿಂತಮೇಲೆ, ತಾವು ಆರಿಸಿಕೊಂಡ ಪ್ರದೇಶದ ಹೊಸ ಗ್ರಾಮಗಳಿಗೂ ಊರುಗಳಿಗೂ ತಮ್ಮ ಮೂಲನಿವಾಸದ ಸ್ಥಳಗಳ ಹೆಸರನ್ನೇ ಇಟ್ಟಂತೆ, ಕೇರಳದಲ್ಲಿರುವ ಅನೇಕ ಸ್ಥಳಗಳಿಗೆ ಪೂರ್ವ ಸಮುದ್ರತೀರದಲ್ಲಿರುವ ಗ್ರಾಮ ಮತ್ತು ಊರುಗಳ ಹೆಸರುಗಳೇ ಇರುವುದು ಕಂಡುಬರುತ್ತದೆ. 'ಅಲ್ವಾಯ್' ಎಂಬುದೂ ಅಂಥದೊಂದು. ಹೀಗೆಯೇ 'ತ್ರಿಚೂರು' ಎಂಬುದು ನಂಬೂದ್ರಿಗಳ ಸಂಪ್ರದಾಯಾನುಸಾರವಾಗಿ 'ತಿರುಶಿವಪುರ'ವಾಗುತ್ತದೆ. ಅಲ್ಲದೆ 'ಶಂಕರ ವಿಜಯ' ಗ್ರಂಥಗಳಲ್ಲಿ ಶಿವಗುರುವು ತ್ರಿಚೂರಿನ ಶಿವದೇವಸ್ಥಾನದಲ್ಲಿ ಪುತ್ರಾರ್ಥಿಯಾಗಿ ತಪಸ್ಸು ಮಾಡಿದನೆಂದು ಉಲ್ಲೇಖಿತವಾಗಿದೆ. ಪೂರ್ವಸಮುದ್ರ ತೀರದಲ್ಲಿನ, ಕುಂಭಕೋಣದ ಸಮೀಪದಲ್ಲಿ 'ತಿರುಶಿವಪುರಂ' ಎಂಬ ಹೆಸರಿನ ದೇವಸ್ಥಾನವಿದೆ. ಸಾವಿರ ವರ್ಷಗಳ ಹಿಂದಿನ ಶೈವಶರಣರಾದ 'ನಾಯನ್ಮಾರ್'ಗಳು ಆ ದೇವರನ್ನು ಹಾಗೆಯೇ ಕೀರ್ತಿಸಿದ್ದಾರೆ. ಈ ದೇವಸ್ಥಾನದಲ್ಲಿರುವ ಹೆಸರು 'ಶಿವಗುರುನಾಥ.' ಆದುದರಿಂದಲೇ ಕುಂಭಕೋಣದ ಸುತ್ತಮುತ್ತ ಶಿವಗುರು, ಶಿವಗುರುನಾಥ ಎಂಬ ಹೆಸರುಗಳು ಕಂಡುಬರುತ್ತವೆ. ತ್ರಿಚೂರಿನ ದೇವರು ಶಿವಪುರದ ಪ್ರತಿಸ್ವರೂಪವಾಗಿರಬಹುದು. ಶಂಕರರ ತಂದೆಯ ಹೆಸರಾದ ಶಿವಗುರು ಎಂಬುದು ಕುಂಭಕೋಣದ ಸಮೀಪದಲ್ಲಿರುವ ಮನೆದೇವರಾದ ಶಿವಗುರುನಾಥ ಎಂಬುದೇ ಆಗಿರಬಹುದು.

1.ಕೇರಳ ಸಂಪ್ರದಾಯ ಒಂದರ ಪ್ರಕಾರ ನಂಬೂದ್ರಿ ಮನೆತನದ ಹೆಸರು "ಕೈಪ್ಪಳ್ಳಿ ಇಲ್ಲಂ."

ದೈವಾನುಗ್ರಹವಾಗಿದ್ದವು. ಆದರೆ, ವರ್ಷಗಳು ಕಳೆದರೂ ಪುತ್ರೋತ್ಸವದ ಆನಂದ ಅವರಿಗೆ ಉಂಟಾಗಲಿಲ್ಲ. ಒಂದು ದಿನ ತನ್ನ ದುಃಖಾನುಭವವನ್ನು ಶಿವಗುರು ಆರ್ಯಾಂಬೆಗೆ ತೋಡಿಕೊಂಡನು. ಅವಳು ಗಂಡನನ್ನು ಸಮಾಧಾನಮಾಡಿ, "ಸರ್ವರಿಗೂ ಕಲ್ಪವೃಕ್ಷವಾಗಿರುವ ಶಿವನನ್ನು ಮೊರೆಹೋಗೋಣ" ಎಂದು ಹೇಳಿದಳು. ಅವರಿಬ್ಬರೂ ಭಜನೆಮಾಡುವುದಕ್ಕಾಗಿ ಸಮೀಪದಲ್ಲಿದ್ದ, ಈಗ ತ್ರಿಚೂರೆಂದು ಕರೆಯಲಾಗುವ ಶಿವಕ್ಷೇತ್ರಕ್ಕೆ ಹೋದರು. ಭಜನೆ ಎಂಬುದು 'ಸೇವೆ ಮಾಡು, ಪೂಜಿಸು' ಎಂಬರ್ಥವುಳ್ಳ ಧಾತುವಿನಿಂದ ಉತ್ಪನ್ನವಾದುದು. ತ್ರಿಚೂರಿನಲ್ಲಿ ಭಜನೆಮಾಡುವವರು ಆ ಸ್ಥಳದಲ್ಲಿಯೇ ಅನೇಕ ದಿನಗಳು, ಕೆಲವು ವೇಳೆ ತಿಂಗಳುಗಟ್ಟಲೆ ಇರುತ್ತಾರೆ; ಪವಿತ್ರ ನದಿಯಲ್ಲಿ ಪ್ರತಿನಿತ್ಯ ಸ್ನಾನಮಾಡಿ ತಮ್ಮ ಸ್ವಭಾವಿಕ ಅಪೇಕ್ಷೆಗಳ ಪೂರೈಕೆಗಾಗಿ ದೇವಸ್ಥಾನಕ್ಕೆ ಹೋಗಿ ಶಿವನಿಗೆ ಪೂಜೆಮಾಡುತ್ತಾರೆ. ಊರಿನ ಮಧ್ಯಭಾಗದಲ್ಲಿರುವ ದಿಬ್ಬದ ಮೇಲೆ ದೇವಸ್ಥಾನವಿದೆ. ಆ ದಿಬ್ಬಕ್ಕೆ ವೃಷಾಚಲ ಅಥವಾ ನಂದಿಬೆಟ್ಟ ಎಂದು ಹೆಸರು. ಈ ಊರಿಗೆ ಇನ್ನೂ ಹೆಚ್ಚು ಜನಪ್ರಿಯವಾದ ಹೆಸರು 'ತಿರುಶಿವಪೆರೂರ್' ಅಂದರೆ, ಪವಿತ್ರವಾದ ಶ್ರೇಷ್ಠ ಶಿವನಗರ. ತ್ರಿಚೂರ್ ಎಂಬುದು ಈ ಪದದ ಅಪಭ್ರಂಶ. ಶಿವಗುರು ಮತ್ತು ಆರ್ಯಾಂಬಾ ಈ ಸ್ಥಳಕ್ಕೆ ಬಂದರು. ಅಲ್ಲಿ ಸಾಕಷ್ಟು ಕಾಲವಿದ್ದು ಭಜನೆ ಮಾಡಿದರು. ಶಿವಗುರು ಮತ್ತು ಆರ್ಯಾಂಬೆಯರ ಭಕ್ತಿ ನಿಷ್ಠೆಗಳಿಂದ ತೃಪ್ತನಾದ ಶಿವನು ಒಂದು ದಿನ ಅವರ ಕನಸಿನಲ್ಲಿ ಒಬ್ಬ ಮುದುಕನಾಗಿ ಕಾಣಿಸಿಕೊಂಡು ಅವರನ್ನು ಕೇಳಿದನು – "ಮಂದಮತಿಗಳಾದ ದೀರ್ಘಾಯುಷಿಗಳಾದ ಅನೇಕ ಮಕ್ಕಳು ಬೇಕೋ; ಪ್ರತಿಭಾಶಾಲಿಯಾದ ಅಲ್ಪಾಯುಷಿಯಾದ ಒಬ್ಬ ಮಗ ಬೇಕೋ ?" ದಂಪತಿಗಳಿಗೆ ದಿಗ್ಭ್ರಮೆಯಾಗಿ ಅವರು ವರದ ಆಯ್ಕೆಯನ್ನು ದೇವರಿಗೇ ಬಿಟ್ಟರು. ಶಿವನು ತಾನೇ ಅವರಲ್ಲಿ ಮಗನಾಗಿ ಹುಟ್ಟುವುದಾಗಿ ಹೇಳಿ ಅವರನ್ನು ಕಾಲಟಿಗೆ ಹಿಂದಿರುಗಲು ಹೇಳಿದನು. ಅವರು ತುಂಬ ಸಂತುಷ್ಟರಾಗಿ ತಮ್ಮ ಹಳ್ಳಿಗೆ ಹಿಂದಿರುಗಿದರು. ಶಿವಗುರು ಬಡವರಿಗೆ ಭೂರಿದಾನ ಮಾಡಿದನು; ಸುತ್ತಣ ಭಕ್ತರಿಗೆಲ್ಲಾ ಔತಣಮಾಡಿ ಉಡುಗೊರೆಗಳನ್ನು ಕೊಟ್ಟನು. ಅತಿಥಿಗಳೆಲ್ಲ ಊಟವಾದಮೇಲೆ ದಂಪತಿಗಳು ಊಟಮಾಡಿದರು. ಬ್ರಾಹ್ಮಣ ಭೋಜನದಿಂದ ಪವಿತ್ರವಾದ ಪ್ರಸಾದವನ್ನು ಸ್ವೀಕರಿಸುವಾಗ ಭಗವಾನ್ ಈಶ್ವರನ ತೇಜಃಪುಂಜವೊಂದು ಆರ್ಯಾಂಬೆಯ ದೇಹವನ್ನು ಪ್ರವೇಶಿಸಿತೆಂದು ಹೇಳುತ್ತಾರೆ. ಕ್ರಮೇಣ ಆರ್ಯಾಂಬೆಯು ಗರ್ಭಿಣಿಯಾದಳು. ಬೆಳಕಿನ ಬೆಳಕಾದ ಪರಮಾತ್ಮನೇ ಅವಳನ್ನು ತಾಯಿಯಾಗಿ ಸ್ವೀಕರಿಸಿದ್ದುದರಿಂದ ಅವಳು ಹೊಸ ಕಾಂತಿಯಿಂದ ಪ್ರಕಾಶಿಸುತ್ತಿದ್ದಳು.

ದಿವ್ಯವಾದ ಅವತಾರಕ್ಕೆ ಆರಿಸಿದ ಮುಹೂರ್ತವು ತುಂಬಾ ಶುಭವಾಗಿತ್ತು – ಸೌರಮಾನ ವೈಶಾಖ ಶುಕ್ಲ ಪಂಚಮಿಯ ಮಧ್ಯಾಹ್ನ, ಪುನರ್ವಸು ನಕ್ಷತ್ರ. ಶಂಕರರ ಜನ್ಮ ಸಮಯದಲ್ಲಿದ್ದ ಪ್ರಕೃತಿಯ ಪ್ರಶಾಂತ ಸೌಂದರ್ಯವನ್ನು *ಶಂಕರ*

ವಿಜಯ ಗ್ರಂಥಗಳು ಭವ್ಯವಾಗಿ ವರ್ಣಿಸುತ್ತವೆ. ತರುಲತೆಗಳು ಹೂಗೊಂಚಲನ್ನು ಧರಿಸಿ ಮುಗುಳ್ನಗೆಯನ್ನು ಸೂಸಿದುವು. ಆಕಾಶವು ಶುಭ್ರ ಕಳಂಕರಹಿವಾಗಿತ್ತು. ಪ್ರಕೃತಿಯಲ್ಲಿನ ಸ್ವಾಭಾವಿಕ ಶತ್ರುಗಳೂ ಕೂಡ ಪರಸ್ಪರ ಸೋದರಭಾವವನ್ನು ವ್ಯಕ್ತಪಡಿಸಿದುವು.

ಭಾರತದ ಚಿಂತನೆ ಮತ್ತು ಸಂಸ್ಕೃತಿಗಳ ಕ್ಷೇತ್ರದಲ್ಲಿನ ಎಲ್ಲ ಕಾಲಮಾನಗಳನ್ನು ನಿರ್ಧಾರಮಾಡುವುದು ಕಷ್ಟವಾಗಿರುವಂತೆಯೇ ಶಂಕರರು ಹುಟ್ಟಿದ ದಿನವನ್ನು ಸರಿಯಾಗಿ ನಿರ್ಧರಿಸುವುದು ಕಷ್ಟ. ಸಂಪ್ರದಾಯದ ಪ್ರಕಾರ ಸಂವತ್ಸರ ನಂದನ, ಮಾಸ ವೈಶಾಖ, ತೇದಿ ಶುಕ್ಲ ಪಂಚಮಿ. ಆದರೆ ಈ ನಂದನ ಸಂವತ್ಸರ ಯಾವುದು? ದ್ವಾರಕಾ, ಪುರಿ, ಕಾಂಚೀಮಠಗಳ ದಾಖಲೆಗಳ ಪ್ರಕಾರ ಅದು ಕ್ರಿ.ಪೂ. 509ರಲ್ಲಿ ಬಂದ ನಂದನ ಸಂವತ್ಸರವಾಗುತ್ತದೆ (ಕಲಿಯುಗದ 2593 ನೇ ವರ್ಷ). ಶಂಕರರು ಮೂವತ್ತೆರಡು ವರ್ಷಗಳು ಮಾತ್ರ ಜೀವಿಸಿದ್ದರೆಂಬ ಬಗ್ಗೆ ಎಲ್ಲ ಅಧಿಕಾರವಾಣಿಗಳ ಒಮ್ಮತವಿರುವುದರಿಂದ ಶಂಕರರ ಕಾಲವು ಈ ದಾಖಲೆಗಳ ಪ್ರಕಾರ ಕ್ರಿ.ಪೂ. 509-477, ಆಗುತ್ತದೆ. ಜಿನವಿಜಯವೆಂಬ ಜೈನಗ್ರಂಥದಲ್ಲಿ ಕುಮಾರಿಲಭಟ್ಟನ ಜನನ ವರ್ಷವು ಕ್ರಿ.ಪೂ. 557 ಎಂದೂ, ಶಂಕರರು ಕುಮಾರಿಲನನ್ನು ಕಂಡ ಸಂವತ್ಸರವು ಕ್ರಿ.ಪೂ. 494 ಎಂದೂ, ಶಂಕರರು ಸಮಾಧಿಯಾದುದು ಕ್ರಿ.ಪೂ. 477 ಎಂದೂ[1] ಹೇಳಿರುವುದರಿಂದ ಹಿಂದೆ ಹೇಳಿದ ಕಾಲಕ್ಕೆ ಒಂದು ಪರೋಕ್ಷವಾದ ಪುಷ್ಟಿ ದೊರೆತಂತಾಗುತ್ತದೆ. ಶೃಂಗೇರಿಯ ಸಂಪ್ರದಾಯದ ಪ್ರಕಾರ ಶಂಕರರ ಜನನ ಸಂವತ್ಸರವು ಕಲಿ 3058, ಅಂದರೆ, ಕ್ರಿ.ಪೂ.44. ಕೆಲವು ವಿದ್ವಾಂಸರ ಪ್ರಕಾರ ಶಂಕರರ ಕಾಲವನ್ನು, ಇನ್ನೂ ಹಿಂದೆ, ಆಗದಿದ್ದರೆ ಕ್ರಿ.ಶ.700 ಎಂದಾದರೂ ನಿರ್ಧರಿಸಬೇಕೆನ್ನುತ್ತಾರೆ. ಬ್ರಹ್ಮಸೂತ್ರ ಭಾಷ್ಯದಲ್ಲಿ (iv, ii, 5) ಪಾಟಲೀಪುತ್ರನಗರದ ಹೆಸರು ಹೇಳಿದೆ. ಸು.ಕ್ರಿ.ಶ .750 ರಲ್ಲಿ ನದೀನೀರಿನ ಕೊರೆತದಿಂದ ಈ ನಗರವು ನಾಶವಾಗಿ ಹೋಯಿತು. ಅದೇ ಭಾಷ್ಯದಲ್ಲಿ (ii, i, 18) ಒಬ್ಬ ಪೂರ್ಣವರ್ಮನ ಹೆಸರಿದೆ. ಇವನು ಬಹುಶಃ ಕ್ರಿ.ಶ590 ರಲ್ಲಿ ಆಳುತ್ತಿದ್ದನೆಂದು, ಹೂಯೆನ್‌ತ್ಸಾಂಗನು ಹೇಳುವ ಮಗಧದ ಬೌದ್ಧ ದೊರೆ ಇರಬಹುದು. ಶಂಕರರು ಕ್ರಿ.ಶ. 750 ರಿಂದ ಈಚೆಗೆ ಬದುಕಿದ್ದರೆ ಈ ಎರಡೂ ಹೇಳಿಕೆಗಳು ಸಾಧ್ಯವಾಗುತ್ತಿರಲಿಲ್ಲ. ಒಂದು ಸಂಸ್ಕೃತ ಹಸ್ತಪ್ರತಿಯಲ್ಲಿ ಉಳಿದುಬಂದಿರುವ ಸಂಕೇತ ಕಾಲಸೂಚಕದ ಪ್ರಕಾರ ಶಂಕರರ ಜನನ ಮತ್ತು ಸಮಾಧಿ ವರ್ಷಗಳು ಕಲಿ 3889 ಮತ್ತು 3921 ಆಗುತ್ತವೆ. ಇವು ಕ್ರಮವಾಗಿ ಕ್ರಿ.ಶ. 788 ಮತ್ತು 820 ಆಗುತ್ತವೆ. ಶಂಕರ ಮಂದಾರ ಸೌರಭ ಎಂಬ ಗ್ರಂಥದಲ್ಲಿಯೂ ಕಲಿ 3889 ಎಂಬುದನ್ನೇ ಜನನದ ವರ್ಷವಾಗಿ

1.ಶಿವರಹಸ್ಯವೂ, ಭವಿಷ್ಯೋತ್ತರ ಪುರಾಣವೂ ಶಂಕರರು ಕಲಿಯುಗದ 2000 ವರ್ಷಗಳಾದಮೇಲೆ ಹುಟ್ಟುತ್ತಾರೆಂದು ತಿಳಿಸುತ್ತವೆ.

ಕೊಟ್ಟಿದೆ. ಈ ವರ್ಷವೇ ಸರಿಯಾದುದೆಂದು ನಿರ್ಧರಿಸಲು ಅನೇಕ ಕಾರಣಗಳನ್ನು ಹೇಳಲಾಗಿದೆ: (1) ಕಾಂಬೋಡಿಯದ ಒಂದು ಶಾಸನದಲ್ಲಿ ತಾನು 'ಭಗವಾನ್ ಶಂಕರ'ರ ಶಿಷ್ಯನೆಂದು ಹೇಳಿಕೊಳ್ಳುವ ಶಿವಸೋಮನೆಂಬೊಬ್ಬನ ಹೆಸರು ಹೇಳಲ್ಪಟ್ಟಿದೆ. ಈ ಶಿವಸೋಮನು ಕ್ರಿ.ಶ. 878-887 ರಲ್ಲಿ ಜೀವಿಸಿದ್ದ ಇಂದ್ರವರ್ಮನ್ ಎಂಬುವನ ಗುರುವಾಗಿದ್ದನು. (2) ಶಂಕರರು ತಮ್ಮ ಸೌಂದರ್ಯಲಹರಿಯ ಎಪ್ಪತ್ತೈದನೆಯ ಶ್ಲೋಕದಲ್ಲಿ ಪಾರ್ವತಿಯಿತ್ತ ಹಾಲು ಕುಡಿದು ಪ್ರಸಿದ್ಧನಾದ 'ದ್ರವಿಡಶಿಶು' ಒಬ್ಬನನ್ನು ಹೆಸರಿಸುತ್ತಾರೆ. ಕೆಲವರು ಈ ಹೆಸರು 7ನೆಯ ಶತಮಾನದಲ್ಲಿ ಬದುಕಿದ್ದ 'ತಿರುಜ್ಞಾನ ಸಂಬಂಧ' ಎಂಬುವನಿಗೆ ಅನ್ವಯಿಸುತ್ತದೆಂದು ತಿಳಿಯುತ್ತಾರೆ. (3) ಶಂಕರ ವಿಜಯ ಗ್ರಂಥಗಳು ಪೂರ್ವಮೀಮಾಂಸದ ಭಾಟ್ಟ ಪಂಥದ ಸ್ಥಾಪಕನಾದ ಕುಮಾರಿಲಭಟ್ಟನನ್ನು ಶಂಕರರು ಕಂಡ ವಿಷಯವನ್ನು ಹೇಳುತ್ತವೆ. ಒಬ್ಬ ಪ್ರಸಿದ್ಧ ಪೌರಸ್ತ್ಯ ಸಂಸ್ಕೃತಿ ಪಂಡಿತನ[1] ಮಾತಿನಂತೆ ಕುಮಾರಿಲಭಟ್ಟನ ಕಾಲ 'ಕ್ರಿ.ಶ. 700ಕ್ಕಿಂತ ಮುಂಚೆ ಇರಲಾರದು.' ಅತಿ ಈಚಿನ ಕ್ರಿ.ಶ. 788-820 ಎಂಬ ಕಾಲವನ್ನು ಒಪ್ಪದವರು ಮತ್ತೆ ಬೇರೆ ಕೆಲವು ವಿಷಯಗಳನ್ನು ಮುಂದಿಡುತ್ತಾರೆ: (1) ಈ ಕಾಲವು ನಿಜವಾಗಿ ಕಾಮಕೋಟಿ ಪೀಠಾಧಿಪತಿಯಾಗಿದ್ದ ಮತ್ತೊಬ್ಬ ಶಂಕರನನ್ನು ಕುರಿತದ್ದು. ಕಾಂಬೋಡಿಯದ ಶಾಸನವೂ ಕೂಡ ಈ ಶಂಕರರನ್ನೇ ಹೆಸರಿಸಿರಬಹುದು. (2) ಸೌಂದರ್ಯ ಲಹರಿಯಲ್ಲಿ ಹೇಳಿರುವ ದ್ರವಿಡಶಿಶುವು ಗ್ರಂಥಕರ್ತನೇ, ಅಂದರೆ ಶಂಕರರೇ ಆಗಿರಬಹುದು. (3) ಕುಮಾರಿಲನ ಕಾಲವು ಕ್ರಿ.ಶ. ಎಂಟನೆಯ ಶತಮಾನವಾಗಿದ್ದಿತೆಂದು ನಿರ್ವಿವಾದವಾಗಿ ಇನ್ನೂ ಸ್ಪಷ್ಟಪಟ್ಟಿಲ್ಲ.

ಹೀಗೆ ನಾನಾವಿಧವಾಗಿರುವ ವಾದ ಪ್ರತಿವಾದಗಳ ಪರಿಣಾಮವಾಗಿ ಶಂಕರರ ಕಾಲವನ್ನು ನಿರ್ಧಾರಮಾಡುವುದು ಅತಿಕಷ್ಟಕರವಾದುದು. ಇದ್ದದ್ದರಲ್ಲಿ ಖಚಿತವಾಗಿ ಹೇಳಬಹುದಾದುದಿಷ್ಟೆ: ಶಂಕರರು ಕಾಳಿದಾಸ, ಕುಮಾರಿಲರಾದ ಬಳಿಕ ಮತ್ತು ವಾಚಸ್ಪತಿಮಿಶ್ರರಿಗೆ ಹಿಂದೆ ಇದ್ದರು. ಶಂಕರರಿಗೆ ಕುಮಾರಿಲಭಟ್ಟರ ವಾದಗಳು ಚೆನ್ನಾಗಿ ಗೊತ್ತಿದ್ದು ಅವುಗಳನ್ನು ಅವರು ಟೀಕೆಗೊಳಗುಮಾಡಿದ್ದಾರೆ. ಆದುದರಿಂದ ಕುಮಾರಿಲನು ಶಂಕರರಿಗೆ ಹಿರಿಯ ಸಮಕಾಲಿಕನಾಗಿರಬಹುದು ಅಥವಾ ಅವರ ಹಿಂದಿನ ತಲೆಮಾರಿಗೆ ಸೇರಿದವನಾಗಿರಬೇಕು. ಕುಮಾರಿಲನು ಕಾಳಿದಾಸನ ಶಾಕುಂತಲದಿಂದ ಭಾಗಗಳನ್ನು ಎತ್ತಿ ಹೇಳಿದ್ದಾನೆ. ಆದುದರಿಂದ ಶಂಕರರ ಕಾಲ ಕಾಳಿದಾಸನಿಗಿಂತ ಈಚಿನದಾಗಿರಬೇಕು. ವಾಚಸ್ಪತಿಮಿಶ್ರನು ಶಂಕರರ ಬ್ರಹ್ಮಸೂತ್ರಭಾಷ್ಯಕ್ಕೆ 'ಭಾಮತಿ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಈ ವಾಚಸ್ಪತಿಯ ಕಾಲವು ಸು. ಕ್ರಿ. ಶ. 841 ಎಂದು ನಂಬಲಾಗಿತ್ತು. ಆದರೆ

1.ಎ.ಬಿ.ಕೀತ್, ಕರ್ಮಮೀಮಾಂಸಾ, ಪುಟ-11.

ಈಗ ಅದು ಸು. ಕ್ರಿ. ಶ. 876 ಎಂದು ನಿರ್ಧರಿಸಲಾಗಿದೆ. ಆದುದರಿಂದ ಈಗಿರುವ ಆಧಾರಗಳ ಬಲದಿಂದ ಶಂಕರರ ಕಾಲವು ಕಾಳಿದಾಸ ಕುಮಾರಿಲರಿಗೆ ಈಚೆಯದೆಂತಲೂ ವಾಚಸ್ಪತಿಗೆ ಹಿಂದಿನದೆಂತಲೂ ಹೇಳಬಹುದು.

ಶಂಕರರ ಜೀವನಕ್ಕೆ ಸಂಬಂಧಿಸಿದ ಎಲ್ಲ ಸಂಪ್ರದಾಯಗಳೂ ಶಂಕರರು ಶಿವನ ಅವತಾರವೆಂದು ನಂಬುತ್ತವೆ. ಶಿವನ ಆರಾಧನೆಯಲ್ಲಿ ಸಾಮಾನ್ಯವಾಗಿ ಉಪಯೋಗಿಸುವ 'ಶ್ರೀರುದ್ರ' ಮಂತ್ರದಲ್ಲಿ ಪರಮಾತ್ಮನನ್ನು ವಿವರಿಸುವ ಪದಪುಂಜಗಳಲ್ಲಿ 'ಕಪರ್ದಿನ್' ಮತ್ತು 'ವ್ಯುಪ್ತಕೇಶ' ಎಂಬೆರಡು ಪದಗಳಿವೆ. ಇದು ಆಸಕ್ತಿಯನ್ನು ಕೆರಳಿಸುವಂಥದು. ಮೊದಲನೆಯ ಪದ ಜಟೆಯಿಂದ ಕೂಡಿರುವವನು ಎಂಬರ್ಥವುಳ್ಳದಾಗಿದ್ದು, ಶಿವನ ಪ್ರಸಿದ್ಧ ವರ್ಣನಾಂಶವಾಗಿದೆ. ಆದರೆ ಎರಡನೆಯದು 'ಮುಂಡನವಾದವನು' ಎಂಬರ್ಥವನ್ನು ಹೊಂದಿರುವುದರಿಂದ ಒಂದು ಸಮಸ್ಯೆಯನ್ನು ಒಡ್ಡುತ್ತದೆ. ಮುಂಡನವಾದ ತಲೆಯುಳ್ಳ ಶಿವನ ವಿಗ್ರಹವಿಲ್ಲ. ಆದುದರಿಂದ ಶ್ರೀರುದ್ರಕ್ಕೆ ಟೀಕೆಯನ್ನು ಬರೆದಿರುವವರೊಬ್ಬರು ಈ ಪದವು ಶಂಕರರರಿಗೆ ಅನ್ವಯಿಸುತ್ತದೆ ಎಂದು ವಿವರಣೆ ನೀಡುತ್ತಾರೆ. ಶಂಕರರು ಶಿವನ ಅವತಾರವಾಗಿದ್ದುದಲ್ಲದೆ ಸನ್ಯಾಸಿಯಾಗಿ ತಮ್ಮ ತಲೆಯನ್ನು ಮುಂಡನ ಮಾಡಿಸಿಕೊಂಡಿದ್ದರು. ಶಿವ ರಹಸ್ಯವು ಭವಿಷ್ಯತ್ಕಾಲಸೂಚಕವಾದ ವಾಕ್ಯದಲ್ಲಿ ನೀಲಕಂಠನಾದ ಶಂಕರನು ಅನೇಕ ಅವತಾರಗಳನ್ನು ಮಾಡಿ, ಶ್ರುತಿಸ್ಮೃತಿಗಳ ಸತ್ಯವನ್ನು ಸ್ಥಾಪಿಸಿ ಜೀವಿಗಳಿಗೆ ಒಳಿತು ಮಾಡುವನೆಂದು ಹೇಳುತ್ತದೆ. ವಾಯು ಪುರಾಣದಲ್ಲಿ ಶಂಕರರು ನಾಲ್ವರು ಶಿಷ್ಯರೊಡಗೂಡಿ ಅವತಾರಮಾಡುತ್ತಾರೆಂದು ಹೇಳಿದೆ. ಶಿಷ್ಯರೆಲ್ಲರೂ ಸ್ವಲ್ಪವೂ ಅನುಮಾನವಿಲ್ಲದೆ ತಮ್ಮ ಗುರುಗಳು ಶಂಕರನ ಅವತಾರವೆಂದೇ ನಂಬಿದ್ದರು. ತಮ್ಮಗುರುಗಳನ್ನು ಕುರಿತು ತೋಟಕಾಚಾರ್ಯರು ಹೀಗೆ ಹೇಳುತ್ತಾರೆ: 'ತಾವು ಭವ (ಶಿವ)ನೇ ಎಂಬುದನ್ನು ನಂಬಿ ನನಗೆ ಮನಸ್ಸಿನಲ್ಲಿ ಆನಂದವುಂಟಾಗುತ್ತದೆ'. ಮತ್ತೊಬ್ಬ ಶಿಷ್ಯರಾದ ಪದ್ಮಪಾದಾಚಾರ್ಯರು ತಮ್ಮ ಗುರುಗಳನ್ನು 'ಅಪೂರ್ವ ಶಂಕರ'ನೆಂದು ವರ್ಣಿಸುತ್ತಾರೆ. ಅನೇಕ ಶಂಕರವಿಜಯಗಳಲ್ಲಿ ಬರುವ ಶ್ಲೋಕವೊಂದು "ವಟವೃಕ್ಷದ ಕೆಳಗಿದ್ದ ದಕ್ಷಿಣಾಮೂರ್ತಿಯು ತನ್ನ ಪೀಠದಿಂದ ಮೇಲೆದ್ದು, ಮೌನವನ್ನು ಬಿಟ್ಟು, ಶಂಕರರ ರೂಪದಲ್ಲಿ ಪ್ರಪಂಚದಲ್ಲಿ ಸುತ್ತಾಡಿ, ಆತ್ಮಜ್ಞಾನವನ್ನು ಹರಡಿ ಅಜ್ಞಾನದಿಂದಲೂ ಸಂಸಾರತಾಪದಿಂದಲೂ ಜನರನ್ನು ರಕ್ಷಿಸಿದನು" ಎಂದು ಹೇಳುತ್ತದೆ.

ಶಿವಗುರುವಿನ ಮನೆಯಲ್ಲಿ ಹುಟ್ಟಿದ ಮಗುವನ್ನು ಕಂಡು ಕಾಲಟಿಯ ಜನರು 'ಶಂಭುವೇ ಅವತರಿಸಿ ಬಂದಿದ್ದಾನೆಂದು ತಿಳಿದರು' ಎಂದು ಆನಂದಗಿರಿ ವರ್ಣಿಸಿದ್ದಾನೆ. ಪದ್ಧತಿಯಂತೆ ಜಾತಕವನ್ನು ಬರೆಯಬೇಕೆಂದು ಕರೆಸಿದ ಜ್ಯೋತಿಷ್ಕರು ಈ ಶಿಶು ಎಲ್ಲ ವಿಧದಲ್ಲಿಯೂ 'ಪೂರ್ಣ'ನೆಂದು ಹೇಳಿದರು. ಹನ್ನೊಂದನೆಯ ದಿನ ಮಗುವಿಗೆ 'ಶಂಕರ'ನೆಂದು ನಾಮಕರಣಮಾಡಿದರು. ಈ ಹೆಸರಿನ ಅಕ್ಷರಗಳು ಮಗುವಿನ

ಜನನದ ದಿನ, ಪಕ್ಷ, ಮಾಸಗಳನ್ನು ತಿಳಿಸುತ್ತವೆ. 'ಕಟಪಯಾದಿಸಂಖ್ಯಾ' ಎಂಬ ಎಣಿಕೆಯ ಮಾರ್ಗವೊಂದಿದೆ. ಸಂಸ್ಕೃತವರ್ಣಮಾಲೆಯಲ್ಲಿ 'ಕ'ಕಾರದಿಂದ ಮೊದಲಾಗುವ ಒಂಭತ್ತು ಅಕ್ಷರಗಳು '1'ರಿಂದ ಮೊದಲಾಗುವ ಒಂಭತ್ತು ಸಂಖ್ಯೆಗಳನ್ನು ಪ್ರತಿನಿಧಿಸುತ್ತವೆ. ಹೀಗೆಯೇ 'ತ'ಕಾರದಿಂದ ಮೊದಲಾಗುವ ಒಂಭತ್ತು ಅಕ್ಷರಗಳೂ, 'ಯ' ಕಾರದಿಂದ ಮೊದಲಾಗುವ ಐದು ಅಕ್ಷರಗಳೂ ಆಯಾ ಅಂಕಿಗಳನ್ನು ಸೂಚಿಸುತ್ತವೆ. ಶಂಕರರು ವೈಶಾಖ ಮಾಸದಲ್ಲಿ ಹುಟ್ಟಿದರು. ಅದು ಎರಡನೆಯ ತಿಂಗಳು, (2-ರ), ಶುಕ್ಲಪಕ್ಷ ಅಂದರೆ, ಮೊದಲನೆಯ ಪಕ್ಷ, (1-ಕ) ಮತ್ತು ಪಂಚಮಿತಿಥಿ (5-ಶ). ಈ ಅಕ್ಷರಗಳನ್ನು ಹಿಂದು ಮುಂದಾಗಿ ಓದಬೇಕು. ಆಗ ಶಂಕರ ಎಂಬುದು ಸಿದ್ಧವಾಗುತ್ತದೆ. ಶಿವಗುರು ಈ ಹೆಸರನ್ನು ಯಾವ ಅರ್ಥಕ್ಕೋಸ್ಕರವಾಗಿಯೂ ಆರಿಸಲಿಲ್ಲ. ಆದರೆ ಶಂಕರರು ಶಿವನ ಅವತಾರವಾದುದರಿಂದಲೂ ಅವರು ಪ್ರಪಂಚಕ್ಕೆ ಅತಿಶಯವಾದ ಶುಭವನ್ನು ಮಾಡುವ ಉದ್ದೇಶದಿಂದ ಹುಟ್ಟಿದುದರಿಂದಲೂ ಆ ಹೆಸರು ಅರ್ಥವತ್ತಾಯಿತು.

ಶಂಕರರ ಜೀವನದ ವಿವಿಧ ಹಂತಗಳನ್ನು ಒಂದು ಸಂಸ್ಕೃತ ಶ್ಲೋಕವು ಹೀಗೆ ವಿವರಿಸುತ್ತದೆ: "ಎಂಟನೆಯ ವರ್ಷದಲ್ಲಿ ಅವರು ನಾಲ್ಕು ವೇದಗಳನ್ನು ಸಂಪೂರ್ಣವಾಗಿ ತಿಳಿದುಕೊಂಡಿದ್ದರು. ಹನ್ನೆರಡರ ವೇಳೆಗೆ ಎಲ್ಲ ಶಾಸ್ತ್ರಗಳೂ ಅವರಿಗೆ ಹೃದ್ಗತವಾಗಿತ್ತು. ಹದಿನಾರರ ವೇಳೆಗೆ ಭಾಷ್ಯಗಳನ್ನು ರಚಿಸಿ ಪೂರೈಸಿದ್ದರು. ಮೂವತ್ತೆರಡನೆಯ ವಯಸ್ಸಿನಲ್ಲಿ ಈ ಲೋಕವನ್ನು ಬಿಟ್ಟರು."

ಶಂಕರರು ಅತ್ಯದ್ಭುತ ಶಿಶುವಾಗಿದ್ದರು. ಅತಿ ಚಿಕ್ಕ ವಯಸ್ಸಿನಲ್ಲಿಯೇ ಅವರು ಅಪಾರವಾದ ಹೃದಯ ವೈಶಾಲ್ಯವನ್ನೂ ಅದ್ಭುತವಾದ ಬುದ್ಧಿಶಕ್ತಿಯನ್ನೂ ಪ್ರದರ್ಶಿಸುತ್ತಿದ್ದರು. ಅವರು ಬಾಲ್ಯದಲ್ಲಿಯೇ ಪ್ರಾಕೃತ, ಮಾಗಧಿ ಮತ್ತು ಸಂಸ್ಕೃತಭಾಷೆಗಳನ್ನು ಪರಿಚಯ ಮಾಡಿಕೊಂಡಿದ್ದರೆಂದು ಆನಂದಗಿರಿ ಹೇಳುತ್ತಾನೆ. ಮಾಧವೀಯ ಶಂಕರವಿಜಯದ ಪ್ರಕಾರ ಅವರು ಮೊದಲನೆಯ ವರ್ಷದಲ್ಲಿ ಸಂಸ್ಕೃತದ ಮತ್ತು ತಮ್ಮ ಮಾತೃಭಾಷೆಯ ಅಕ್ಷರಗಳನ್ನು ಕಲಿತರೆಂದೂ, ಎರಡನೆಯ ವರ್ಷದಲ್ಲಿ ಓದಲು ಬಲ್ಲವರಾದರೆಂದೂ, ಮೂರನೆಯ ವರ್ಷದಲ್ಲಿ ಕಾವ್ಯಪುರಾಣಾದಿಗಳನ್ನು ಓದಿ ತಾವೇ ಅರ್ಥಮಾಡಿಕೊಳ್ಳಬಲ್ಲವರಾಗಿದ್ದರೆಂದೂ ತಿಳಿದುಬರುತ್ತದೆ. ಉಪನಯನ ಮಾಡುವುದಕ್ಕೆ ಮುಂಚೆಯೇ ಶಿವಗುರುವು ತೀರಿಕೊಂಡನು.[1] ಆರ್ಯಾಂಬೆಯನ್ನು ಮಗನೇ ಸಮಾಧಾನಮಾಡಬೇಕಾಯಿತು. ಅವನಿಗೋಸ್ಕರವಾಗಿಯೇ ಅವಳು ಜೀವಿಸಿರಬೇಕಾಯಿತು. ಶಂಕರರಿಗೆ ಐದು ವರ್ಷವಾದಾಗ ಉಪನಯನವಾಯಿತು. ವೇದಾಭ್ಯಾಸಕ್ಕಾಗಿ ಅವರನ್ನು ಗುರುಕುಲಕ್ಕೆ ಕಳುಹಿಸಲಾಯಿತು. ಷಡಂಗಸಹಿತವಾಗಿ ವೇದಸಮುದಾಯವನ್ನೂ ಎಲ್ಲ ಶಾಸ್ತ್ರಗಳನ್ನೂ

---

1.'ಚಿದ್ವಿಲಾಸ' ಮತ್ತು 'ಗುರುರತ್ನ ಮಾಲಿಕಾ' ಎಂಬ ಗ್ರಂಥಗಳು ಶಿವಗುರು ಮಗನ ಉಪನಯನ ಮಾಡುವಷ್ಟು ಕಾಲ ಬದುಕಿದ್ದನೆಂದು ಹೇಳುತ್ತವೆ.

ಸ್ವಲ್ಪ ಕಾಲದಲ್ಲಿಯೇ ಅವರು ಹೃದ್ಗತಮಾಡಿಕೊಂಡರು. ವಿಧಿನಿಯಮದಂತೆ ಅವರು ಬ್ರಹ್ಮಚಾರಿಗಳಾಗಿ ಗುರುಸೇವೆಮಾಡುತ್ತಾ ಭಿಕ್ಷೆಯಿಂದ ಊಟಮಾಡುತ್ತಾ ಇದ್ದರು.

ಶಂಕರರ ಗುರುಕುಲವಾಸದಲ್ಲಿ ನಡೆಯಿತೆಂದು ಹೇಳಲಾಗುವ ಒಂದು ಪವಾಡವನ್ನು ನೆನೆಯುವುದು ಅಗತ್ಯ. ಶಂಕರರು ಬ್ರಹ್ಮಚಾರಿಯಾಗಿ ಒಬ್ಬ ಬಡಬ್ರಾಹ್ಮಣನ ಮನೆಗೆ ಭಿಕ್ಷಕ್ಕೆ ಹೋದರು. ಆ ಬ್ರಾಹ್ಮಣನು ತನ್ನ ಅಂದಿನ ಉದರಂಭರಣಕ್ಕಾಗಿ ಹೊರಗೆ ಹೋಗಿದ್ದನು. ಶಂಕರರನ್ನು ಕಂಡು ಆ ಬ್ರಾಹ್ಮಣನ ಹೆಂಡತಿಯು ಹೊರಗೆ ಬಂದು ಭಿಕ್ಷೆಯೆಂದು ಕೊಡಲು ಮನೆಯಲ್ಲಿ ಏನೊಂದೂ ಇರಲಿಲ್ಲವೆಂದು ಸಂಕಟಪಟ್ಟಳು. ಮನೆಯನ್ನೆಲ್ಲ ಚೆನ್ನಾಗಿ ಹುಡುಕಿ ತನಗೆ ಸಿಕ್ಕಿದ ಒಂದು ನೆಲ್ಲಿಕಾಯಿಯನ್ನು ಶಂಕರರ ಭಿಕ್ಷಾಪಾತ್ರೆಯಲ್ಲಿ ಹಾಕಿ ಅದಕ್ಕಿಂತ ಹೆಚ್ಚೇನನ್ನೂ ಕೊಡಲಾರೆನೆಂದು ಹೇಳಿದಳು. ಆ ಹೆಂಗಸಿನ ಭಕ್ತಿಯಿಂದ ಶಂಕರರು ಅನುಕಂಪೆಗೊಳಗಾದರು. ಶಿವನಿಗಿರುವ ಹೆಸರುಗಳಲ್ಲಿ 'ಆಶುತೋಷ' (ತತ್‌ಕ್ಷಣ ತೃಪ್ತಿಪಡುವವ) ಎಂಬುದು ಒಂದು ಇದೆ. ಹಾಗೆ ಅನುಕಂಪೆಯಿಂದ ಅವರು ಐಶ್ವರ್ಯದಧಿದೇವತೆಯಾದ ಲಕ್ಷ್ಮಿಯನ್ನು ಪ್ರಾರ್ಥಿಸಿ, ಆ ಬ್ರಾಹ್ಮಣ ದಂಪತಿಗಳಿಗೆ ಕರುಣೆತೋರುವಂತೆ ಪ್ರಾರ್ಥಿಸಿದರು. ಇದೇ ಶಂಕರರು ರಚಿಸಿದ ಮೊದಲ ಸ್ತೋತ್ರ. ಇದಕ್ಕೆ 'ಕನಕಧಾರಾಸ್ತವ' ಎಂದು ಹೆಸರು. ಶಂಕರರ ಈ ಸ್ತೋತ್ರದ ಪರಿಣಾಮವಾಗಿ ಚಿನ್ನದ ಆಮಲಕಗಳ ಮಳೆ ಸುರಿಯಿತು.[1] ಭಕ್ತಳಾದ ಆ ಹೆಂಗಸೂ ಈ ವೇಳೆಗೆ ಮನೆಗೆ ಬಂದ ಅವಳ ಗಂಡನೂ ಆಶ್ಚರ್ಯಚಕಿತರಾಗಿ ಈ ದೇವಬಾಲಕನನ್ನು ಪೂಜೆಮಾಡಿದರು. ಹೀಗೆ ಶಂಕರರ ಪ್ರಥಮ ಸೇವೆಯೆಂಬುದು ದಾರಿದ್ರ್ಯದ ನಿರ್ಮೂಲನವಾಯಿತು.

ಎಂಟು ವರ್ಷ ತುಂಬುವುದಕ್ಕೆ ಮುಂಚೆಯೇ ಶಂಕರರ ಗುರುಕುಲದ ವಿದ್ಯಾಭ್ಯಾಸ ಪೂರೈಸಿತು. ಮಾಧವೀಯ *ಶಂಕರವಿಜಯದಲ್ಲಿ* ಒಂದು ಶ್ಲೋಕ ಹೀಗೆ ಹೇಳುತ್ತದೆ: ಂಅವರು ತರ್ಕದಲ್ಲಿ ಪಾರಂಗತರಾದರು, ಸಾಂಖ್ಯದಲ್ಲಿ ಪೂರ್ಣಪಾಂಡಿತ್ಯವನ್ನು ಪಡೆದರು, ಪಾತಂಜಲಿಯೋಗದಲ್ಲಿ ಅದ್ಭುತ ವಿದ್ವತ್ತನ್ನು ಸಂಪಾದಿಸಿದರು, ಭಾಟ್ಟಮೀಮಾಂಸದ ಜಟಿಲ ತತ್ತ್ವಗಳನ್ನು ಸ್ವಾಧೀನಪಡಿಸಿಕೊಂಡರು; ಈ ಎಲ್ಲ ವಿದ್ಯೆಗಳ ಜ್ಞಾನದಿಂದುಂಟಾದ ಸುಖವು ಅದ್ವೈತವಿದ್ಯೆಯ ಪರಮಾನಂದದಲ್ಲಿ ಲೀನವಾಯಿತು. ಬಾವಿಯಿಂದ ಒದಗುವ ಸಹಾಯ ಸಮುದ್ರದ ದೆಸೆಯಿಂದ ಬರುವ ಲಾಭವನ್ನು ಮೀರಿಸಲಾದೀತೆ? (iv, 20) ಅಭ್ಯಾಸಶೀಲರನ್ನು ಜ್ಞಾನವು ಅಲಂಕರಿಸುತ್ತದೆ. ಆದರೆ ಶಂಕರರ ವಿಚಾರದಲ್ಲಿ ಅವರೇ ಪಾಂಡಿತ್ಯಕ್ಕೆ ಅಲಂಕಾರವಾಗಿದ್ದರು (iv, 34).

---

1.ಈ ನಂಬೂದ್ರಿ ಮನೆತನಕ್ಕೆ ಸ್ವರ್ಣದ ಮನೆ ಎಂದು ಹೆಸರಾಯಿತು. ಕಾಲಟಿಯ ಹತ್ತಿರದಲ್ಲಿ ಈಗಲೂ ಅದು ಅದೇ ಹೆಸರಿನಿಂದ ಪ್ರಸಿದ್ಧವಾಗಿದೆ.

ಶಿಕ್ಷಣವು ಪೂರೈಸಿದಮೇಲೆ ಶಂಕರರು ಗುರುಕುಲದಿಂದ ಹಿಂದಿರುಗಿ ತಾಯಿಯೊಡನೆ ವಾಸಮಾಡಲು ಮೊದಲುಮಾಡಿದರು. ಒಂದು ದಿನ ಆರ್ಯಾಂಬೆಗೆ ತಾನು ಅಸ್ವಸ್ಥಳೂ ನಿಶ್ಶಕ್ತಳೂ ಆಗಿದ್ದಂತೆ ತೋರಿತು. ಆದರೂ ಪ್ರತಿನಿತ್ಯದಂತೆ ಮನೆಯಿಂದ ಸ್ವಲ್ಪದೂರದಲ್ಲಿದ್ದ ನದಿಗೆ ಸ್ನಾನಕ್ಕೆಂದು ನಡೆದುಕೊಂಡೇ ಹೋದಳು. ಮನೆಗೆ ಹಿಂದಿರುಗುವಾಗ ಅವಳಿಗೆ ಪ್ರಜ್ಞೆ ತಪ್ಪಿತು. ಶಂಕರರು ಇದನ್ನು ಕೇಳಿ ಆ ಸ್ಥಳಕ್ಕೆ ಓಡಿಹೋಗಿ ತಾಯಿಯನ್ನು ಮನೆಗೆ ಕರೆದುಕೊಂಡು ಬಂದರು. ಮತ್ತೆ ತಾಯಿಗೆ ಹೀಗಾಗಬಾರದೆಂದು ಅವರು ಚೂರ್ಣಾನದಿಗೆ ಪ್ರಾರ್ಥನೆ ಸಲ್ಲಿಸಿ ಅದು ತನ್ನ ಮಾರ್ಗವನ್ನು ಬದಲಿಸಿ ತಮ್ಮ ಮನೆಯ ಮುಂದೆ ಹರಿಯಬೇಕೆಂದು ಕೇಳಿಕೊಂಡರು. ಮರುದಿನ ಬೆಳಗಾಗುವ ಹೊತ್ತಿಗೆ ಈ ಪವಾಡವು ನಡೆದುಹೋಗಿತ್ತು. ಈ ಘಟನೆಯು ಆಚಾರ್ಯರ ವ್ಯಕ್ತಿತ್ವದಲ್ಲಿದ್ದ ಮಾನವೀಯತೆಯನ್ನು ಸ್ಪಷ್ಟಪಡಿಸುತ್ತದೆ. ಶಂಕರರು ಆ ಬಳಿಕ ರಚಿಸಿದ ಕೃತಿಗಳಲ್ಲಿಯೂ ಮಾತೃತ್ವಕ್ಕೆ ಅಪಾರ ಗೌರವವನ್ನು ಸಲ್ಲಿಸಿರುವುದು ಕಂಡುಬರುತ್ತದೆ. ಬೃಹದಾರಣ್ಯಕೋಪನಿಷತ್ತಿನ ಭಾಷ್ಯದಲ್ಲಿ ತಾಯಿಯನ್ನು ಮಗನ ಸರ್ವಸಂಪೂರ್ಣಗುರುವೆಂದು ವರ್ಣಿಸುತ್ತಾರೆ. (ಪುತ್ರಸ್ಯ ಸಮ್ಯಗನುಶಾಸ್ತ್ರೀ ಅನುಶಾಸನಕರ್ತ್ರೀ)[1]

ಶಂಕರರಿಗೆ ಎಂಟು ವರ್ಷಗಳು ತುಂಬುವ ವೇಳೆಗೆ ಕೆಲವು ಋಷಿಗಳು ಅವರ ಮನೆಗೆ ಬಂದು ಶಂಕರರನ್ನು ಕಂಡರು. ಶಂಕರರೂ ಅವರ ತಾಯಿಯೂ ಅತಿಥಿಗಳನ್ನು ಯೋಗ್ಯರೀತಿಯಲ್ಲಿ ಅತ್ಯಾನಂದದಿಂದ ಸತ್ಕರಿಸಿದರು. ತಮಗೆ ದೊರೆತ ಸತ್ಕಾರದಿಂದಲೂ ಬಾಲಕನಲ್ಲಿ ಕಂಡುಬರುತ್ತಿದ್ದ ದೈವಿಕವಾದ ಗುಣಾತಿಶಯಗಳಿಂದಲೂ ಅವರು ತುಂಬ ತೃಪ್ತರಾದರು. ಅವರು ಆರ್ಯಾಂಬೆಗೆ ಶಂಕರರ ಜನನದ ವಿಚಾರವನ್ನೆಲ್ಲ ತಿಳಿಸಿ, ಮೊದಲ ಆಲೋಚನೆಯ ಪ್ರಕಾರ ಶಂಕರರು ಎಂಟೇ ವರ್ಷಗಳು ಜೀವಿಸಿರಬೇಕೆಂಬುದು ನಿಶ್ಚಿತವಾಗಿದ್ದರೂ ಈಗ ಅದರೆರಡರಷ್ಟು ಕಾಲ ಬದುಕಿರಲು ವರ ದೊರಕಿರುವುದಾಗಿ ಹೇಳಿದರು. ಮನೆಮಂದಿಯರನ್ನು ಆಶೀರ್ವದಿಸಿ ಅವರು ಹೊರಟುಹೋದರು. ತನ್ನ ಮಗನು ಅಲ್ಪಾಯುಷಿಯೆಂಬುದನ್ನು ತಿಳಿದ ಮೇಲೆ ಆರ್ಯಾಂಬೆಗೆ ತುಂಬ ಚಿಂತೆಯಾಯಿತು. ಆದರೆ ಶಂಕರರು ತಮ್ಮ ತಾಯಿಗೆ ಇಹಜೀವನದ ನಶ್ವರತೆಯ ಸ್ವರೂಪವನ್ನು ವಿವರಿಸಿ ಅವಳ ಚಿಂತೆಯನ್ನು ದೂರಮಾಡಲು ಪ್ರಯತ್ನಿಸಿದರು. ತಾಯಿ–ಮಕ್ಕಳೆಂಬಂಥ ಇಹಜೀವನದ ಸಂಬಂಧಗಳು ಪ್ರಯಾಣಿಕರ ಮಿಲನದಂತೆ ಅಲ್ಪಕಾಲವಾದುವವೆಂದು ಅವರು ವಿವರಿಸಿದರು.

ಮಗನಲ್ಲಿ ವೈರಾಗ್ಯಪರವಾದ ಭಾವನೆಗಳನ್ನು ಕಂಡ ಆರ್ಯಾಂಬೆಯು ಮಗನ ಮನಸ್ಸನ್ನು ಸಂಸಾರದ ಬಾಧ್ಯತೆ ಮತ್ತು ಕರ್ತವ್ಯಗಳ ಕಡೆಗೆ ತಿರುಗಿಸಲು ಅಪೇಕ್ಷಿಸಿದಳು. ಶಂಕರರು ತನ್ನ ಒಬ್ಬನೇ ಮಗನಾದುದರಿಂದ ಅವರನ್ನು

---

1. ಬೃಹದಾರಣ್ಯಕೋಪನಿಷದ್ಭಾಷ್ಯ (iv, i, 2).

ಕಳೆದುಕೊಳ್ಳಲು ಅವಳು ಸಿದ್ಧಳಾಗಿರಲಿಲ್ಲ. ಆದುದರಿಂದ, ಮಗನಿಗೆ ಬೇಗ ಮದುವೆಮಾಡಬೇಕೆಂದು ಅವಳು ಏರ್ಪಾಟು ಮಾಡುತ್ತಿದ್ದಳು. ಆದರೆ ಪ್ರಾಪಂಚಿಕ ವ್ಯವಹಾರದಲ್ಲಿ ಶಂಕರರಿಗೆ ಯಾವ ಆಕರ್ಷಣೆಯೂ ಇರಲಿಲ್ಲ. ಜೀವನದಲ್ಲಿ ಮಾನವರು ಹೊಂದಿರಬಹುದಾದ ಅತಿಶ್ರೇಷ್ಠ ಧರ್ಮೋದ್ದೇಶದಿಂದ ಅವರು ಜನ್ಮತಾಳಿದ್ದರು. ಪ್ರಪಂಚಕ್ಕೆಲ್ಲ ತಮ್ಮ ಸಮಗ್ರಾನುಭವವನ್ನು ಅಡೆತಡೆಯಿಲ್ಲದೆ ಪ್ರಸಾರಮಾಡಿ ಮಾನವತೆಯನ್ನು ಪರಮಾನಂದದ ಶಾಂತಿಯೆಡೆಗೆ ಒಯ್ಯುವುದೇ ಅವರ ಉದ್ದೇಶವಾಗಿತ್ತು. ಆದುದರಿಂದ, ಅನೇಕ ಮಕ್ಕಳು ತಮ್ಮ ಗೊಂಬೆಗಳನ್ನು ಬಿಡುವುದಕ್ಕೂ ಹಿಂಜರಿಯುವ ವಯಸ್ಸಿನಲ್ಲಿ ಅವರು ಸಾಂಸಾರಿಕ ಜೀವನವನ್ನು ತ್ಯಜಿಸಲು ಮನಸ್ಸುಮಾಡಿದರು. ಆದರೆ ಅವರ ತಾಯಿಯು ಒಪ್ಪುತ್ತಿರಲಿಲ್ಲ. ಯಾವ ಮಾತೆ ತಾನೇ ತನ್ನ ಮಗುವನ್ನು ಮನಃಪೂರ್ವಕವಾಗಿ ಬಿಟ್ಟುಕೊಡುತ್ತಾಳೆ ? ಆದುದರಿಂದ ಒಂದು ಪವಾಡವೇ ನಡೆಯಬೇಕಾಯಿತು.

ಒಂದು ದಿನ ಶಂಕರರು ಮನೆಯ ಮುಂದಿನ ನದಿಯಲ್ಲಿ ಸ್ನಾನಮಾಡಲು ಹೋಗಿ ನೀರಿಗಿಳಿದರು. ಆಗ ಒಂದು ಮೊಸಳೆಯು ಅವರ ಕಾಲನ್ನು ಹಿಡಿದುಕೊಂಡು ಹೊಳೆಯಲ್ಲಿ ಆಳವಾದ ಪ್ರದೇಶಕ್ಕೆ ಎಳೆಯತೊಡಗಿತು. ಶಂಕರರು ತಾಯಿಯನ್ನು ಕೂಗಿ ಕರೆದರು. ಈ ಕೂಗನ್ನು ಕೇಳಿ ಬಂದ ತಾಯಿಗೆ ಹೆದರಿಕೆ ಆತಂಕಗಳುಂಟಾದುವು. ನದಿಯಲ್ಲಿ ಮಗನು ಉಳಿವಿಗಾಗಿ ಒದ್ದಾಡುತ್ತಿರುವುದು ಕಂಡುಬಂದಿತು.[1] ತಮಗೇನಾಗುತ್ತಿದೆಯೆಂಬುದನ್ನು ಶಂಕರರು ಅವಳಿಗೆ ಹೇಳಿದರು. ಮೊಸಳೆಯು ಅವರನ್ನು ಬಿಡದೆ ಹಿಡಿದೇ ಇತ್ತು. ಅವರು ಸನ್ಯಾಸಾಶ್ರಮವನ್ನು ಸ್ವೀಕರಿಸಲು ತಾಯಿಯ ಅನುಮತಿಯನ್ನು ಬೇಡಿದರು. ತುಂಬ ಕಷ್ಟದಲ್ಲಿದ್ದಾಗ ಅಥವಾ ಸಾವು ಬರುವ ಸಮಯದಲ್ಲಿ ಸನ್ಯಾಸವನ್ನು ಸ್ವೀಕರಿಸುವುದು ಧಾರ್ಮಿಕವಾದ ಪದ್ಧತಿ. ಇದಕ್ಕೆ ಆಪತ್ಸನ್ಯಾಸ ಎಂದು ಹೆಸರು. ಬಾಲಕರಾದ ಶಂಕರರ ಪ್ರಾರ್ಥನೆ ತೀವ್ರವಾಗಿತ್ತು. ಬೇರೆ ಯಾವ ಮಾರ್ಗವೂ ಇಲ್ಲದೆ ತಾಯಿ ತನ್ನ ಅನುಮತಿಯನ್ನಿತ್ತಳು. ಸನ್ಯಾಸವೆನ್ನುವುದು ಮತ್ತೊಂದು ಜನ್ಮವಾದುದರಿಂದ ಈ ಗಂಡವು ಶಂಕರರ ಪ್ರಾಣವನ್ನು ತೆಗೆದುಕೊಳ್ಳದೆ ಕಳೆದುಹೋಗಬಹುದಾಗಿತ್ತು. ಕಣ್ಣೀರು ಸುರಿಸುತ್ತಾ ಆರ್ಯಾಂಬೆ, ತನಗೆ ತನ್ನ ಮಗನು ಬದುಕುವುದು ಅಗತ್ಯವೆಂದೂ, ಸನ್ಯಾಸ ಸ್ವೀಕಾರದಿಂದ ಅವನ ಪ್ರಾಣ ಉಳಿಯುವುದು ಸಾಧ್ಯವಾದರೆ ತನಗೆ ಅದು ಅತ್ಯಂತ ಸಮಾಧಾನಕರವೆಂದೂ ಹೇಳಿದಳು. ತಾಯಿಯ ಅನುಮತಿ ದೊರೆತೊಡನೆಯೇ ಶಂಕರರು ಮನಸ್ಸಿನಲ್ಲಿಯೇ ಸನ್ಯಾಸ ಸ್ವೀಕಾರ ಮಾಡಿದರು. ಮೊಸಳೆಯು ಶಂಕರರನ್ನು ಆ ಕ್ಷಣವೇ ಬಿಡುಗಡೆ ಮಾಡಿತು. ಅಲ್ಲದೆ ತನಗೆ

---

1 ಕೊಚಿನ್ ಪ್ರದೇಶದಲ್ಲಿ ಒಂದು ಸಂಪ್ರದಾಯದ ಕಥೆಯಂತೆ ಶಂಕರರು ಒಂದು ಸಂಜೆ, ಕತ್ತಲೆಕವಿದಮೇಲೆ ಶುದ್ಧಿಸ್ನಾನಕ್ಕಾಗಿ ನದಿಗೆ ಹೋದರು. ಅವರ ತಾಯಿಯೂ ದಾರಿ ತೋರಲು ಎಣ್ಣೆಯ ದೀಪವನ್ನು ಹಿಡಿದು ಅವರೊಡನೆ ಹೋದಳು ಎಂದಿದೆ.

ಬಂದಿದ್ದ ಶಾಪದಿಂದಲೂ ಅದು ಮೋಕ್ಷ ಹೊಂದಿತು. ಬಾಲಕ ಶಂಕರರು ನದಿಯಿಂದ ಯಾವ ಅಪಾಯವಿಲ್ಲದೆ ಹೊರಬಂದು ಪರಿವ್ರಾಜಕ ಸನ್ಯಾಸಿಯ ಜೀವನವನ್ನು ನಡೆಸಲು ದೃಢನಿರ್ಧಾರವನ್ನು ಕೈಗೊಂಡರು.

ಮೊಸಳೆಯ ದವಡೆಯಿಂದ ಅತ್ಯಾಶ್ಚರ್ಯಕರವಾದ ರೀತಿಯಲ್ಲಿ ಮಗನು ಬದುಕಿ ಬಂದ ಸಂತೋಷದಲ್ಲಿ ಆರ್ಯಾಂಬೆಯು ಶಂಕರರು ಸನ್ಯಾಸ ಸ್ವೀಕಾರ ಮಾಡಲು ಒಪ್ಪಿಗೆ ಇತ್ತುದನ್ನು ಮರೆತುಬಿಟ್ಟಳು. ಶಂಕರರು ಮತ್ತೆ ಎಂದಿನಂತೆ ತನ್ನ ಮಗನಾಗಿ ಇರುವರೆಂದು ತಿಳಿದಳು. ಆದರೆ ಈಗ ತನಗೆ ಭಿಕ್ಷೆ ನೀಡುವ ಹೆಂಗಸರೆಲ್ಲ ತನಗೆ ತಾಯಿಯರೆಂದೂ ತನಗೆ ಜ್ಞಾನದಾನ ಮಾಡುವ ಗುರುಗಳೆಲ್ಲ ತಂದೆಗಳೆಂದೂ ತನ್ನಿಂದ ವಿವೇಕವನ್ನು ಅಪೇಕ್ಷಿಸುವ ಶಿಷ್ಯರೆಲ್ಲ ಮಕ್ಕಳೆಂದೂ ಶಂಕರರು ತಾಯಿಗೆ ನೆನಪು ಮಾಡಿಕೊಟ್ಟರು. ಹೀಗೆ, ಕಾಲಟಿಯ ಮನೆಯೊಂದೇ ಅಲ್ಲದೆ ಪ್ರಪಂಚವೆಲ್ಲವೂ ಅವರಿಗೆ ಮನೆಯಾಯಿತು. ತಮಗೆ ವಿಧಿಪೂರ್ವಕವಾಗಿ ಸನ್ಯಾಸ ದೀಕ್ಷೆಯನ್ನು ಕೊಡುವ ಗುರುವನ್ನು ಅನ್ವೇಷಿಸಲು ತಮ್ಮ ಪೂರ್ವಿಕರ ಮನೆಯನ್ನು ಬಿಟ್ಟುಹೋಗಲು ಅಪ್ಪಣೆಬೇಕೆಂದು ತಾಯಿಯನ್ನು ಕೇಳಿದರು. ಆದರೆ ಮನೆ ಬಿಡುವುದಕ್ಕೆ ಮುಂಚೆ ಆರ್ಯಾಂಬೆಯ ಸಂಬಂಧಿಕರೊಡನೆ ಅವಳ ಪೋಷಣೆಗೆ ತಕ್ಕ ಏರ್ಪಾಟು ಮಾಡಿದರು. ಅಲ್ಲದೆ ತಮ್ಮ ಸಾನ್ನಿಧ್ಯದ ಅಗತ್ಯವಿದ್ದಾಗ ಹಿಂದಿರುಗುವುದಾಗಿಯೂ, ಆಕೆಯ ಸಾವಿನನಂತರ ತಾವೇ ಉತ್ತರಕ್ರಿಯೆಗಳನ್ನು ಮಾಡುವುದಾಗಿಯೂ ಆರ್ಯಾಂಬೆಗೆ ಅವರು ಮಾತುಕೊಟ್ಟರು. ಪ್ರೀತಿಯ ತಾಯಿಗೆ, ಕಾಲಟಿಯನ್ನು ಬಿಡುವುದಕ್ಕೆ ಅಪ್ಪಣೆ ಕೊಡುವುದಲ್ಲದೆ ಬೇರೆ ಮಾರ್ಗವೇ ಇರಲಿಲ್ಲ. ಆಕೆಗೆ ಸಾಷ್ಟಾಂಗ ನಮಸ್ಕಾರಮಾಡಿ ಶಂಕರರು ಧರ್ಮೋದ್ದೇಶ ಸಾಧನೆಗಾಗಿ ಹೊರಟರು.

# 2. ಕಾಲಟಿಯಿಂದ ಕಾಶಿಗೆ

ಶಂಕರರು ಎಂಟು ವರ್ಷದ ಬಾಲಕನಾಗಿ ಕಾಲಟಿಯನ್ನು ಬಿಟ್ಟು ಗುರುವನ್ನು ಹುಡುಕಿಕೊಂಡು ಉತ್ತರ ದಿಕ್ಕಿಗೆ ಪ್ರಯಾಣಮಾಡಿದರು. ಅದ್ವೈತದ ಪ್ರಕಾರ ಗುರು-ಶಿಷ್ಯ, ತಂದೆ-ಮಕ್ಕಳು ಮುಂತಾಗಿ ಅನೇಕ ಸಂಬಂಧಗಳಲ್ಲಿ ಕಾಣುವುದು 'ಬ್ರಹ್ಮ-ಆತ್ಮ' ಎಂಬ ಸತ್ಯವೇ. ವಿವೇಕಿಗಳಿಗೆ ಇದು ಗೊತ್ತು, ಅವಿವೇಕಿಗಳಿಗೆ ತಿಳಿಯದು. ಅದ್ವೈತ ಸತ್ಯವನ್ನು ಪ್ರಕಾಶಪಡಿಸಲು ಇಹಲೋಕಕ್ಕೆ ಬಂದ ಶಂಕರರು ಸಾಮಾನ್ಯರ ಪದ್ಧತಿಯಂತೆ ಗುರುವಿನ ಅನ್ವೇಷಣೆಯಲ್ಲಿ ತೊಡಗಿದರು. ವಿವೇಕ ಬೋಧನೆಗೆ ಅರ್ಹನಾದವನಿಂದ ಅದನ್ನು ಪಡೆಯುವುದು ಅಗತ್ಯವೆನ್ನುವುದನ್ನು ದೃಷ್ಟಾಂತಪಡಿಸುವುದೇ ಈ ಅನ್ವೇಷಣೆಯ ಉದ್ದೇಶವಾಗಿತ್ತು. ಕಾಲಟಿಯಿಂದ ಹೊರಟ ಈ ದೈವ ಯಾತ್ರಿಕನು ಊರು ಗ್ರಾಮಗಳ ನಡುವೆ ಕಾಡು ಬೆಟ್ಟಗಳ ನಡುವೆ ದಾರಿಯಲ್ಲಿ ಮುಂದೆ ಸಾಗಿದನು. ದೂರ ಪ್ರಯಾಣವಾದಮೇಲೆ ಶಂಕರರು ನರ್ಮದಾತೀರವನ್ನು[1] ಸೇರಿ ಅಲ್ಲಿ ತಮ್ಮ ಗುರುವನ್ನು ಕಂಡರು. ಅಲ್ಲಿ ಒಂದು ಗುಹೆಯಲ್ಲಿ ಗೌಡಪಾದರ ಶಿಷ್ಯರಾದ ಗೋವಿಂದಭಗವತ್ಪಾದರು ವಾಸಿಸುತ್ತಿದ್ದರು. ಅವರನ್ನು ತಮ್ಮ ಮಾರ್ಗದರ್ಶಕರೆಂದು ಆಶ್ರಯಿಸಿದ್ದ ಅನೇಕ ವಿದ್ವಾಂಸರೂ ವಿವೇಕಿಗಳೂ ಅವರ ಸೇವೆ ಮಾಡುತ್ತಿದ್ದರು.

ಗೋವಿಂದರು ಸಮಾಧಿಸ್ಥರಾಗಿ ಕುಳಿತಿದ್ದ ಗವಿಯ ಬಾಗಿಲಿನಲ್ಲಿ ಶಂಕರರು ನಿಂತರು. ತಮ್ಮ ಆಗಮನವನ್ನು ತಿಳಿಸಿ ತಮ್ಮನ್ನು ಶಿಷ್ಯನನ್ನಾಗಿ ಸ್ವೀಕರಿಸಬೇಕೆಂದು ಪ್ರಾರ್ಥನೆಮಾಡಿದರು. ಸಮಾಧಿಯಿಂದ ಎಚ್ಚೆತ್ತ ಗೋವಿಂದರು ಅವರಿಗೆ ಒಂದು ಪ್ರಶ್ನೆಯನ್ನು ಹಾಕಿದರು: 'ನೀನಾರು?' ಎಂದು. ಈ ಪ್ರಶ್ನೆಗೆ ಉತ್ತರವಾಗಿ ಶಂಕರರು 'ದಶಶ್ಲೋಕ'ವೆಂದು ಪ್ರಸಿದ್ಧವಾಗಿರುವ ಹತ್ತು ಶ್ಲೋಕಗಳಲ್ಲಿ ನಿಜವಾದ 'ನಾನು' ಎಂಬ ಪರಬ್ರಹ್ಮಸ್ವರೂಪವನ್ನು ನಿರೂಪಿಸಿದರು. ಈ ಹತ್ತು ಶ್ಲೋಕಗಳಲ್ಲಿ ಪರಿಶೇಷ್ಯನ್ಯಾಯವನ್ನನುಸರಿಸಿ ಸತ್ಯವಾವುದೆಂಬುದನ್ನು ತಿಳಿಸಿಕೊಟ್ಟಿದ್ದಾರೆ. ಇಂದ್ರಿಯ ಗೋಚರವಾದ ಈ ಪ್ರಪಂಚದ ಎಲ್ಲ ವಿಷಯಗಳೂ ನಾಶವಾದಮೇಲೆ ಉಳಿಯುವುದು ಒಂದೇ - ಅದ್ವೈತವಾದ ಆತ್ಮ. ಜಾಗ್ರತಸ್ಥಿತಿಯಲ್ಲಿ ಅನುಭವಕ್ಕೆ ಬರುವ ವಾಸ್ತವಿಕ ಜಗತ್ತೆಲ್ಲವೂ ಸ್ವಪ್ನಸ್ಥಿತಿಯಲ್ಲಿ ಅಮೂರ್ತವಾಗುತ್ತವೆ. ಸ್ವಪ್ನಸ್ಥಿತಿಯಲ್ಲಿ

---

1.ಆನಂದಗಿರಿಯ ಪ್ರಕಾರ ಈ ಸ್ಥಳದ ಹೆಸರು ವ್ಯಾಘ್ರಪುರ. ಮತ್ತೆ ಕೆಲವು ಹೇಳಿಕೆಗಳ ಪ್ರಕಾರ ಶಂಕರರು ತಮ್ಮ ಗುರುವನ್ನು ಬದರಿಕಾಶ್ರಮದಲ್ಲಿ ಕಂಡರು.

ಕಾಣುವ ಭಾವನಾಪ್ರತಿಮೆಗಳು ಗಾಢವಾದ ನಿದ್ದೆಯಲ್ಲಿ ಅಗೋಚರವಾಗುತ್ತವೆ. ವಾಸ್ತವಿಕ ಸತ್ಯವೂ ಪ್ರಾತಿಭಾಸಿಕ ಸತ್ಯವೂ ಆದ ಜಗತ್ತುಗಳು ನಾಶವಾದಮೇಲೆಯೂ ಶುದ್ಧಜ್ಞಾನದಲ್ಲಿ ಆತ್ಮವು ಪ್ರಕಾಶಪೂರ್ಣವಾಗಿರುತ್ತದೆ. ಸುಷುಪ್ತಿಯೆನ್ನುವುದು ಅಭಾವಪರಿಸ್ಥಿತಿಯಲ್ಲ. ಅಭಾವದ ಪ್ರಜ್ಞೆಯಿರುವುದೇ ಅಭಾವಸ್ಥಿತಿಯಲ್ಲ. ಆತ್ಮವೆನ್ನುವುದು ಯಾವಾಗಲೂ ಯಾತರಿಂದಲೂ ವಿರೋಧಿಸಲ್ಪಟ್ಟಿಲ್ಲ. ಮಿಕ್ಕ ಎಲ್ಲವೂ ಅಗೋಚರವಾದರೂ ಆತ್ಮವು ಮಾತ್ರ ಇರುತ್ತದೆ. ಆಕಾಶವು ನಾಶವಾದರೂ ಕಾಲದ ಚಲನೆ ನಿಂತರೂ ಆತ್ಮಕ್ಕೆ ಯಾವ ಹಾನಿಯೂ ಇಲ್ಲ. ಉಪನಿಷತ್ತುಗಳಲ್ಲಿ ಆತ್ಮ ಮತ್ತು ಬ್ರಹ್ಮ ಎಂಬ ಪದಗಳಿಂದ ಕರೆಯುವ ಅಚಲವಾದ ಸ್ಥಿರವಾದ ಸತ್ಯವೇ ಇದು. ಆತ್ಮವೆನ್ನುವುದು ಮಂಗಳಕರವಾದುದು, ಅತ್ಯಮೂಲ್ಯವಾದುದು. ಅದೇ ಅದ್ವೈತವಾದ ಸತ್-ಚಿತ್-ಆನಂದ. ಸದ್ವಿಚಾರದಿಂದ ಬ್ರಹ್ಮನೇ ಆತ್ಮ, ಅದು 'ಅಹಂ' ಅಥವಾ 'ನಾನು' ಎನ್ನುವುದರಿಂದ ಮುಚ್ಚಿದೆ ಎಂಬುದನ್ನು ತಿಳಿಯಬೇಕು. ಹೀಗೆ ದಶಶ್ಲೋಕಿಯಲ್ಲಿ ಶಂಕರರು ಪರಮ ತತ್ವದ ಪರಾಸತ್ಯವನ್ನು ಸಾರಿದ್ದಾರೆ. ಅಲ್ಲಿನ ವಾಗ್ಝೋರಣೆಗೆ ಜಿಜ್ಞಾಸುಗಳನ್ನು ಅಜ್ಞಾನದ ನಿದ್ರೆಯಿಂದ ಹೊಡೆದೆಬ್ಬಿಸುವ ಅತ್ಯಸಾಧಾರಣ ಶಕ್ತಿಯಿದೆ.[1]

ಶಂಕರರ ಅದ್ವೈತವಾದದ ಉದಾತ್ತ ನಿರೂಪಣೆಯನ್ನು ಕೇಳಿ ಗೋವಿಂದಭಗವತ್ಪಾದರಿಗೆ ಪರಮ ಸಂತೋಷವಾಯಿತು.[2] ಅವರು ಶಂಕರರನ್ನು ಹೊಗಳಿ ವೇದಾಂತದ ವಿವೇಕವನ್ನು ಭೂಮಿಯಲ್ಲಿ ಮತ್ತೆ ಸ್ಥಿರಗೊಳಿಸಲು ಅವತಾರವೆತ್ತಿದ ಪರಮಶಿವನನ್ನು ತಾವು ಕಂಡುಹಿಡಿದುದಾಗಿ ತಿಳಿಸಿದರು. ಸಂಪ್ರದಾಯದಂತೆ ಶಂಕರರಿಗೆ ಪರಮಹಂಸ ಸನ್ಯಾಸವನ್ನು ಕೊಟ್ಟ ಬಳಿಕ ಅದ್ವೈತ ಸತ್ಯವನ್ನು ಬೋಧಿಸುವ ಉಪನಿಷತ್ತಿನ ಮಹಾವಾಕ್ಯಗಳ ತಾತ್ಪರ್ಯವನ್ನು ಬೋಧಿಸಿದ್ದಾಯಿತು.

ಗೋವಿಂದಭಗವತ್ಪಾದರ ಆಶ್ರಮದಲ್ಲಿ ಶಂಕರರು ವಾಸಿಸುತ್ತಿದ್ದಾಗ ಒಂದು ಪವಾಡ ನಡೆಯಿತು. ನರ್ಮದಾ ನದಿಯಲ್ಲಿ ಪ್ರವಾಹಬಂದು ಅದು ತನ್ನ ಎರಡು ದಡಗಳಮೇಲಿದ್ದ ಹಳ್ಳಿಗಳನ್ನೆಲ್ಲ ಮುಳುಗಿಸುವಂತೆ ಉಕ್ಕಿ ಹರಿಯಿತು; ಹಳ್ಳಿಗಳೆಲ್ಲವೂ ಕೊಚ್ಚಿಹೋಗುವುದರಲ್ಲಿದ್ದವು; ಜನರಿಗೆ ದಿಕ್ಕುತೋಚದಂತಾಯಿತು. ಕರುಣಾಳು

1.ನೋಡಿ: ಶಂಕರಾಚಾರ್ಯರ ದಶಶ್ಲೋಕೀ - ಅನುವಾದ (ಇಂಗ್ಲಿಷ್) Vedanta in Verses; ಲೇಖಕರು ಟಿ.ಎಂ.ಪಿ. ಮಹದೇವನ್ ಮತ್ತು ಎನ್.ವೀ.ಜಿ. ನಾಥನ್ (ಶಂಕರವಿಹಾರ, ಮದ್ರಾಸು - 12, 1965).

2.ಈ ಆಶ್ರಮವು ಹಿಮಾಲಯದಲ್ಲಿದ್ದಿತೆಂದು ತಿಳಿಸುವ ಚಿದ್ವಿಲಾಸನು, ಗೋವಿಂದರು ಕೇಳಿದ ಪ್ರಶ್ನೆಗೆ ಶಂಕರರು ತಾವು ಶಿವಗುರುವಿನ ಪುತ್ರನೆಂದು ತಿಳಿಸಿ ಕಾಲಟಿಯನ್ನು ಬಿಡಬೇಕಾಗಿಬಂದ ಪ್ರಸಂಗವೆಲ್ಲವನ್ನೂ ಮೊಸಳೆಯ ಕಥೆಯನ್ನೂ ಕೂಡ ಹೇಳಿದರೆಂದೂ, ಅಲ್ಲದೆ ತಮ್ಮನ್ನು ಶಿಷ್ಯನನ್ನಾಗಿ ಸ್ವೀಕರಿಸುವಂತೆ ಬೇಡಿಕೊಂಡರೆಂದೂ ಹೇಳಿದ್ದಾನೆ.

ಶಂಕರರು ತಮ್ಮ ಕಮಂಡಲುವನ್ನು ನೆಲದಮೇಲಿಟ್ಟು ಜಲಾಕರ್ಷಣಮಂತ್ರವನ್ನು ಜಪಿಸಿ ನದಿಯ ಪ್ರವಾಹವು ಇಳಿಯುವಂತೆ ಮಾಡಿದರು; ಹತ್ತಿರದ ಹಳ್ಳಿಗಳೂ ತಮ್ಮ ಗುರುವಿನ ಆಶ್ರಮವೂ ನಾಶವಾಗದಂತೆ ರಕ್ಷಿಸಿದರು. ವ್ಯಾಸಋಷಿಗಳು, ಹಿಂದೆಯೇ ನರ್ಮದೆಯ ಪ್ರವಾಹವನ್ನು ಮಂತ್ರಶಕ್ತಿಯಿಂದ ಶಮನಗೊಳಿಸಿ ಸುತ್ತ ಮುತ್ತಣ ಪ್ರದೇಶವನ್ನು ರಕ್ಷಿಸುವ ವ್ಯಕ್ತಿಯೇ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆಯಲು ತಕ್ಕವನೆಂದು ಭವಿಷ್ಯವನ್ನು ನುಡಿದಿದ್ದರು. ಇದನ್ನು ತಿಳಿದಿದ್ದ ಗೋವಿಂದ ಗುರುಗಳು ಇತರ ರೀತಿಗಳಲ್ಲಿಯೂ ಶಂಕರರ ಮಹಿಮೆಯನ್ನು ಅರಿತುಕೊಂಡಿದ್ದುದರಿಂದ ಶಂಕರರು ಕಾಶಿಗೆ ಹೋಗಿ ಬ್ರಹ್ಮಸೂತ್ರದ ಅರ್ಥವನ್ನು ಪ್ರತಿಪಾದಿಸಬೇಕೆಂದೂ ಇತರ ಎರಡು ಪ್ರಸ್ಥಾನಗಳಾದ ಉಪನಿಷತ್ತುಗಳು ಮತ್ತು ಭಗವದ್ಗೀತೆ ಇವುಗಳ ಅರ್ಥವನ್ನು ಪ್ರತಿಪಾದಿಸಬೇಕೆಂದೂ ಅಪ್ಪಣೆಮಾಡಿದರು.

ಭಾರತದ ಚರಿತ್ರೆಯಲ್ಲಿ ವಿದ್ವತ್ತಿಗೂ ಪಾರಮಾರ್ಥಿಕಜ್ಞಾನಕ್ಕೂ ಪ್ರಸಿದ್ಧವಾಗಿದ್ದ ಕಾಶಿ ಅಥವಾ ವಾರಣಾಸಿಗೆ ಶಂಕರರು ಹೊರಟರು. ಕಾಶಿಯಲ್ಲಿ ಶಂಕರರಿಗೆ ಅವರ ಪ್ರಥಮ ಶಿಷ್ಯನು ದೊರಕಿದನು. ಆಚಾರ್ಯರ ಕರುಣೆಗೆ ಹೀಗೆ ಒಳಗಾದವನು ಶಂಕರರಿಗಿಂತ ಸ್ವಲ್ಪಕಾಲ ಮುಂಚೆ ಅಲ್ಲಿಗೆ ಚೋಳದೇಶದಿಂದ ಬಂದಿದ್ದ ವಿಷ್ಣುಶರ್ಮನೆಂಬುವನು. ಅವನಿಗೆ ಶಂಕರರು ದಯಪಾಲಿಸಿದ ಸನ್ಯಾಸನಾಮ 'ಸನಂದನ'. ಬಹುಬೇಗ ಇತರ ಶಿಷ್ಯರೂ ಈ ಗುರುವಿನ ಬಳಿ ಸೇರಿದರು. ಸನಂದನನಿಗೆ ಗುರುಗಳು ಅನುಚಿತವಾಗಿ ಪಕ್ಷಪಾತ ತೋರಿಸುತ್ತಿದ್ದಾರೆಂದು ಈ ಶಿಷ್ಯರು ಊಹಿಸಿಕೊಂಡರು. ಅಲ್ಲದೆ ಅಂಥ ಗೌರವಕ್ಕೆ ಅವನು ಅನರ್ಹನೆಂದೂ ಭಾವಿಸಿದರು. ಸನಂದನನ ಯೋಗ್ಯತೆಯನ್ನು ಈ ಶಿಷ್ಯರಿಗೆ ಪ್ರದರ್ಶಿಸಬೇಕೆಂದು ಗುರುಗಳಿಗೆ ಅಪೇಕ್ಷೆಯಾಯಿತು. ಒಂದು ದಿನ ಈ ಶಿಷ್ಯರೊಡನೆ ಗಂಗಾನದಿಯಲ್ಲಿ ಸ್ನಾನಮಾಡುತ್ತಿದ್ದಾಗ ಸನಂದನನು ಎದುರು ದಡದಲ್ಲಿ ತಮ್ಮ ಮಡಿಬಟ್ಟೆಗಳನ್ನು ಹಿಡಿದು ನಿಂತಿದ್ದುದು ಕಂಡುಬಂದಿತು. ಗುರುಗಳು ಅವನನ್ನು ಕೂಗಿ ತಮ್ಮ ಬಳಿಗೆ ಬರುವಂತೆ ಕರೆದರು. ಸನಂದನನು ಒಡನೆಯೇ ಯಾವುದನ್ನೂ ಯೋಚಿಸದೆ ನದಿಯನ್ನು ಅಡ್ಡಲಾಗಿ ದಾಟಲು ಕಾಲಿಟ್ಟನು. ನದಿಯಮೇಲೆ ಅವನು ಒಂದೊಂದು ಹೆಜ್ಜೆಯನ್ನಿಟ್ಟಾಗಲೂ ಒಳಗಿನಿಂದ ಒಂದು ಪದ್ಮಪುಷ್ಪವು ಅವನ ಪಾದಕ್ಕೆ ಆಧಾರವಾಗಿರಲು ಮೇಲೆದ್ದಿತು. ಆದುದರಿಂದಲೇ ಅವನಿಗೆ ಪದ್ಮಪಾದ ಎಂಬ ಹೆಸರುಂಟಾಯಿತು.

ಶಂಕರರ ಶಿಷ್ಯರಾದ ಇನ್ನಿಬ್ಬರ ವಿಚಾರವನ್ನು ಇಲ್ಲಿ ಹೇಳಬಹುದು. ಪ್ರಭಾಕರನೆಂಬ ಒಬ್ಬನು ತನ್ನ ಮೂಕ ಮಗನಿಗೆ ಆಚಾರ್ಯರ ಅನುಗ್ರಹದಿಂದ ಮಾತನಾಡುವ ಶಕ್ತಿಯುಂಟಾಗಬಹುದೆಂದು ಅವನನ್ನು ಶಂಕರರ ಬಳಿಗೆ ಕರೆತಂದನು.[1] ಗುರುಗಳು

---

1. ಮಾಧವೀಯ *ಶಂಕರವಿಜಯದ* ಪ್ರಕಾರ ಈ ಘಟನೆಯು ನಡೆದ ಸ್ಥಳ 'ಶ್ರೀಬಲಿಪುರ'. ಆ ಸಮಯದಲ್ಲಿ ಈ ಬಾಲಕನಿಗೆ ಹದಿಮೂರು ವರ್ಷಗಳಾಗಿದ್ದುವು.

ಹುಡುಗನನ್ನು ಕುರಿತು 'ನೀನಾರು?' ಎಂದು ಪ್ರಶ್ನಿಸಿದರು. ಬಾಲಕನು ಒಡನೆಯೇ ಮನೋದೇಹಗಳಿಗೆ ಸಂಬಂಧಪಟ್ಟ ಅಂಶಗಳಿಂದ ಬೇರೆಯಾದ ಆತ್ಮವೇ ತಾನು ಎಂದು ಉತ್ತರಕೊಟ್ಟನು. ಈ ಅಭಿಪ್ರಾಯವನ್ನು ಕೆಲವು ಶ್ಲೋಕಗಳಲ್ಲಿ ಘೋಷಿಸಿ, ಪ್ರತಿಯೊಂದು ಶ್ಲೋಕದಲ್ಲಿಯೂ 'ಸ ನಿತ್ಯೋಪಲಬ್ಧಿ ಸ್ವರೂಪೋಯಮಾತ್ಮಾ' (ನಿತ್ಯಸ್ವರೂಪವಾದ ಆತ್ಮವೇ ನಾನು) ಎಂದು ದೃಢವಾಗಿ ಹೇಳಿದನು. ಗುರುಗಳಿಗೆ ತುಂಬ ಆನಂದವಾಯಿತು. ಈ ಬಾಲಕನನ್ನು ತಮ್ಮ ಶಿಷ್ಯವರ್ಗದಲ್ಲಿ ಸೇರಿಸಿಕೊಂಡು ಅವನಿಗೆ ಸನ್ಯಾಸವನ್ನೂ ಹಸ್ತಾಮಲಕ ಎಂಬ ಹೆಸರನ್ನೂ ಕೊಟ್ಟರು. 'ಹಸ್ತಾಮಲಕ' ಎಂದರೆ ಅಂಗೈಲಿಟ್ಟ ನೆಲ್ಲಿಕಾಯಿಯಂತೆ ಖಚಿತವಾದ ಜ್ಞಾನವುಳ್ಳವನು ಎಂದರ್ಥ. ಹಸ್ತಾಮಲಕನಿಂದ ರಚಿತವಾದ ಈ ಶ್ಲೋಕಗಳಿಗೆ ಶಂಕರರಿಂದಲೇ ಭಾಷ್ಯವನ್ನು ಪಡೆಯುವ ವಿಶೇಷ ಗೌರವವುಂಟಾಗಿದೆ. ಅದರ ಹೆಸರು ಹಸ್ತಾಮಲಕೀಯ ಭಾಷ್ಯ.

ಇದೇ ಸಮಯದಲ್ಲಿ ಶಂಕರರ ಶಿಷ್ಯನಾದ ಮತ್ತೊಬ್ಬನ ಹೆಸರು ಕಾಲನಾಥ. ಅವನು ಶಂಕರರನ್ನು ಸಮೀಪಿಸಿ ತನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಬೇಕೆಂದು ಕೇಳಿಕೊಂಡನು. ಅವನು ಶಂಕರರ ಹಿರಿಮೆಯನ್ನು ಹೊಗಳುವ, ಕಠಿಣವಾದರೂ ಸುಂದರವಾದ ತೋಟಕವೃತ್ತದಲ್ಲಿ ರಚಿತವಾದ ಒಂದು ಸ್ತೋತ್ರವನ್ನು ಹಾಡಿದನು.[1] ಶಂಕರರು ಅವನಿಗೂ ಸನ್ಯಾಸವನ್ನಿತ್ತು ತೋಟಕಾಚಾರ್ಯನೆಂಬ ಹೆಸರನ್ನು ಕೊಟ್ಟರು. ಈ ಶ್ಲೋಕನಲ್ಲಿ ಗುರುವಾದ ಶಂಕರರೇ ತನ್ನ ಸರ್ವಸ್ವವೆಂದೂ ಅಜ್ಞಾನಾಂಧಕಾರವನ್ನು ನಾಶಮಾಡುವವರೇ ಅವರೆಂದೂ ಹೇಳಿದ್ದಾನೆ. ಈ ಸ್ತೋತ್ರದ ಪಲ್ಲವಿಯು ಅಂತರಂಗವನ್ನೇ ಕಲಕುವ ಶಿಷ್ಯ ಭಕ್ತಿಯಿಂದ ಕೂಡಿದೆ: 'ಶಂಕರದೇಶಿಕರೇ ನನಗೆ ರಕ್ಷಕರಾಗಿರಿ' (ಭವ ಶಂಕರದೇಶಿಕ ಮೇ ಶರಣಂ).

ಶಂಕರರು ಕಾಶಿಯಲ್ಲಿ ಇದ್ದಾಗ ನಡೆದ ಒಂದು ಘಟನೆಯನ್ನು ನಿರೂಪಿಸಬಹುದು. ವಾರಣಾಸಿಯಲ್ಲಿ ಒಂದು ದಿನ ಶಂಕರರು ತಮ್ಮ ಶಿಷ್ಯರೊಡನೆ ಗಂಗಾನದಿಯ ಕಡೆಗೆ ಹೋಗುತ್ತಿದ್ದರು. ಸ್ವಲ್ಪ ದೂರದಲ್ಲಿ ನಾಲ್ಕು ಭಯಂಕರವಾದ ನಾಯಿಗಳೊಡನೆ ನಡೆದುಬರುತ್ತಿದ್ದ ಒಬ್ಬ ಚಂಡಾಲನನ್ನು ಅವರು ನೋಡಿದರು. ಚಂಡಾಲನನ್ನು ಕುರಿತು ಅವರು 'ದೂರ ಹೋಗು, ದೂರ ಹೋಗು' ಎಂದು ಹೇಳಿದರು. ಅದಕ್ಕೆ ಉತ್ತರವಾಗಿ ಚಂಡಾಲನು ಕೇಳಿದನು: 'ಏನು ದೂರಹೋಗಬೇಕು? ಯಾತರಿಂದ ದೂರಹೋಗಬೇಕು? ಭೌತ ಶರೀರ ದೂರಹೋಗಬೇಕೆ ? ಅಥವಾ ಆತ್ಮವೋ? ಈ ಶರೀರವಾದರೆ ಎಲ್ಲ ಶರೀರಗಳೂ ಒಂದೇ ಮೂಲವಸ್ತುವನ್ನು ಒಳಗೊಂಡಿರುವುದರಿಂದ ಒಂದು ಶರೀರ ಮತ್ತೊಂದು ಶರೀರದಿಂದ ಏಕೆ ದೂರಹೋಗಬೇಕು? ಅದು ಆತ್ಮವಾದರೆ ಅದು ಯಾತರಿಂದತಾನೆ

---

1.ನೋಡಿ: *Homage to Sankara*, ಲೇಖಕರು: ಟಿ.ಎಂ.ಪಿ. ಮಹದೇವನ್ (ಗಣೇಶ್ ಮತ್ತು ಕಂಪೆನಿ, ಮದ್ರಾಸು-17, 1959), ಪುಟಗಳು 29-43.

ದೂರಹೋಗಬಲ್ಲುದು? ಯಾಕೆಂದರೆ ಅದು ಅದ್ವೈತವಲ್ಲವೆ ? ಅನ್ನಮಯವಾದ ಒಂದು ದೇಹದಿಂದ ಇನ್ನೊಂದು ಅನ್ನಮಯವಾದ ದೇಹ ದೂರಹೋಗಬೇಕೆ ? ಆತ್ಮಜ್ಞಾನ ಆತ್ಮಜ್ಞಾನದಿಂದ ದೂರಹೋಗಬೇಕೆ ? ಪರಮಹಂಸಯತಿಯೇ ನೀವು 'ದೂರಹೋಗು, ದೂರ ಹೋಗು' ಎಂದು ಹೇಳುವುದರಿಂದ ಯಾವುದು ದೂರಹೋಗಬೇಕೆಂದು ಹೇಳುತ್ತೀರಿ, ದಯಮಾಡಿ ತಿಳಿಸಿ'.

ಭೌತಿಕವಾಗಿಯಾಗಲಿ ಆಧ್ಯಾತ್ಮಿಕವಾಗಿಯಾಗಲಿ ಒಬ್ಬರಿಗೊಬ್ಬರಿಗೆ ಏನೂ ವ್ಯತ್ಯಾಸವಿಲ್ಲ. ಎಲ್ಲ ಭೂತವಸ್ತುಗಳೂ ಒಂದೇ; ಆತ್ಮ ಒಂದೇ. ಯಾವಾಗ ಒಂದನ್ನು ಇನ್ನೊಂದು ಮುಚ್ಚುತ್ತದೆಯೋ ಅಥವಾ ಒಂದರ ಸ್ವಭಾವ ಗುಣಶೀಲಗಳನ್ನು ಮತ್ತೊಂದರ ಸ್ವಭಾವ ಗುಣಶೀಲಗಳಾಗಿ ತಪ್ಪು ತಿಳಿದುಕೊಳ್ಳುತ್ತೇವೆಯೋ ಆಗಲೇ ಈ ವ್ಯತ್ಯಾಸವುಂಟಾಗುವುದು. ಈ ಎರಡರ ನಡುವಿನ ವ್ಯತ್ಯಾಸವನ್ನು ಅರ್ಥಮಾಡಿಕೊಳ್ಳುವುದೇ, ಯಾವುದು ಭೌತವಸ್ತುವೆಂದು ಕಾಣುತ್ತದೆಯೋ ಅದು ಸತ್ಯವಲ್ಲವೆಂದು ಅರಿಯುವುದೇ, ಆತ್ಮ ಒಂದೇ ಸತ್ಯವೆಂದು ಅರ್ಥಮಾಡಿಕೊಳ್ಳುವುದೇ ವಿವೇಕ.

ಚಂಡಾಲನು ಆತ್ಮದ ನಿತ್ಯಸತ್ಯವನ್ನು ವಿವರಿಸುತ್ತಾ ಹೀಗೆ ಹೇಳಿದನು: "ತರಂಗರಹಿತವಾದ ಜ್ಞಾನಾನಂದಸಮುದ್ರದಂತಿರುವ ಅಂತರಂಗ ಸತ್ಯದಲ್ಲಿ 'ಇವನು ಬ್ರಾಹ್ಮಣ ಇವನು ಶ್ವಪಚ' ಎಂಬ ಭೇದದ ಭ್ರಮೆಯೆಲ್ಲಿ ಬಂತು! ಗಂಗೆಯಲ್ಲಿ ಪ್ರತಿಬಿಂಬಿಸುವ ಸೂರ್ಯನಿಗೂ ಚಂಡಾಲರು ವಾಸಿಸುವ ಕೇರಿಯ ಬೀದಿಯ ನಡುವಿನ ಹಳ್ಳದ ನೀರಿನಲ್ಲಿ ಪ್ರತಿಬಿಂಬಿಸುವ ಸೂರ್ಯನಿಗೂ ವ್ಯತ್ಯಾಸವಿದೆಯೇನು? ಚಿನ್ನದ ಕಲಶದೊಳಗಿನ ಆಕಾಶಕ್ಕೂ ಮಡಕೆಯೊಳಗಿನ ಆಕಾಶಕ್ಕೂ ಭೇದವಿದೆಯೇ?"

ಆತ್ಮವೆನ್ನುವುದು ಸಚ್ಚಿದಾನಂದ ಸ್ವರೂಪವಾದುದು. ಅದು ವಿರೂಪಗೊಳ್ಳದ್ದು, ವ್ಯತ್ಯಾಸವಾಗದ್ದು–ಕ್ಷೋಭೆಗೊಳ್ಳದ, ಕ್ಷೋಭೆಗೊಳಿಸಲಾರದ ಸಮುದ್ರದಂತೆ. ಅದರ ಮುಖ್ಯ ಸ್ವಭಾವವು ಸತ್–ಚಿತ್–ಅನಂದ ಎಂಬ ಸೂತ್ರದಲ್ಲಿ ವ್ಯಕ್ತವಾಗಿದೆ. ಸತ್–ಚಿತ್–ಆನಂದ ಎಂಬುವು ಪರಸ್ಪರ ಭೇದವುಳ್ಳ ಅತ್ಮದ ಸ್ವಭಾವಗಳೆಂದು ತಿಳಿಯಬಾರದು. ಆತ್ಮ ಅಥವಾ ಬ್ರಹ್ಮವೆನ್ನುವುದು ಸತ್ ಮುಂತಾದುವುಗಳಿಂದ ಗುರುತಿಸಲಾಗದ್ದು. ಅತ್ಮವು ಸಚ್ಚಿದಾನಂದ. ಸತ್ ಎನ್ನುವುದು ಚಿತ್; ಚಿತ್ ಎನ್ನುವುದು ಆನಂದ. ಅತ್ಮದಲ್ಲಾಗಲಿ ಅತ್ಮಕ್ಕಾಗಲಿ ಸ್ವಲ್ಪವೂ ವ್ಯತ್ಯಾಸದ ಕುರುಹೇ ಇಲ್ಲ. ಅತ್ಮಕ್ಕೆ ಸಮಾನವಾದುದಾಗಲಿ ಅಸಮಾನವಾದುದಾಗಲಿ ಯಾವುದೂ ಇಲ್ಲ. ಅನೇಕ ಭಾಗಗಳು ಸೇರಿ ಒಂದಾದುದಲ್ಲ ಆತ್ಮ. ಅದು ಎಲ್ಲ ಕಡೆಯೂ ಯಾವಾಗಲೂ ಒಂದೇ ಸ್ವರೂಪವುಳ್ಳದ್ದು. ಆತ್ಮವು ಅದ್ವೈತವಾದದ್ದು; ಅದು ನಿಸ್ಸೀಮವಾದುದು, ಸರ್ವಶಕ್ತವಾದುದು. ಆತ್ಮ ಶಾಂತವಾದ, ಅಪಾರವಾದ ಸಾಗರದಂತಿರುವುದು. ಉತ್ತಮ ಜಾತಿಯಲ್ಲಿ ಹುಟ್ಟಿದುದು, ಹೀನ ಜಾತಿಯಲ್ಲಿ ಹುಟ್ಟಿದುದು ಮುಂತಾದ ವ್ಯತ್ಯಾಸಗಳು ಅದಕ್ಕೆ ಹೇಗೆ ತಾನೆ ಅನ್ವಯವಾಗುತ್ತವೆ?

ಸರ್ವಾಂತರ್ಯಾಮಿಯಾದ ಅದ್ವೈತಸತ್ಯವಾದ ಬ್ರಹ್ಮನಲ್ಲಿ ಅಣುವಿನಷ್ಟೂ ವ್ಯತ್ಯಾಸವಿರುವ ಸಾಧ್ಯತೆಯಿಲ್ಲ. ದೇಹ ಮುಂತಾದ ಗೌಣವಿಷಯಗಳಿಂದ ವ್ಯತ್ಯಾಸವಿದ್ದಂತೆ ಕಂಡುಬರುತ್ತದೆ, ಅಷ್ಟೆ! ಈ ವ್ಯತ್ಯಾಸಗಳಂತೂ ಆತ್ಮಕ್ಕೆ ಅಂಟುವುದಿಲ್ಲ.

ಶಂಕರರು ಈ ವಿವೇಕಪೂರ್ಣವಾದ ವಾಕ್ಯಗಳನ್ನು ಕೇಳಿ ಒಡನೆಯೇ ಚಂಡಾಲನ ವೇಷದಲ್ಲಿ ಬಂದಿರುವವನು ಪರಮಶಿವನೇ ಎಂದು ತಿಳಿದರು. ನಿಜವಾಗಿ ಇದೊಂದು ರೀತಿಯ ಏಕಪಾತ್ರಭಿನಯವಾಗಿತ್ತು; ಒಂದೇ ಸತ್ಯವು ಗುರುಶಿಷ್ಯರೆಂಬ ಎರಡು ಪಾತ್ರಗಳನ್ನು ನಟಿಸುತ್ತಿತ್ತು. ಈ ಸನ್ನಿವೇಶದಲ್ಲಿ ಶಂಕರರು ದಕ್ಷಿಣಾಮೂರ್ತಿಸ್ತೋತ್ರದಲ್ಲಿ ನಿರೂಪಿಸಿರುವ ಅಂಶದ ನಾಟಕೀಯ ದೃಷ್ಟಾಂತವು ಕಂಡುಬರುತ್ತದೆ: "ಗುರು-ಶಿಷ್ಯ, ತಂದೆ-ಮಗ, ಮುಂತಾಗಿ ಬೇರೆಬೇರೆ ರೂಪಗಳಲ್ಲಿ ಕಾಣುವುದು ಒಂದೇ ಸತ್ಯ. ಚಂಡಾಲನೂ ಶಂಕರರೂ ಇಬ್ಬರೂ ಪರಮಶಿವನ ಬೇರೆ ಬೇರೆ ಸ್ವರೂಪಗಳು." 'ಮಾನಿಷ ಪಂಚಕಂ' ಎಂಬ ಜಾಜ್ವಲ್ಯಮಾನವಾದ ಐದು ಶ್ಲೋಕಗಳಲ್ಲಿ ಅದ್ವೈತದ ಪರಮಸತ್ಯವನ್ನು ಪ್ರದರ್ಶಿಸಲು ಶಂಕರರು ಈ ನಾಟಕವನ್ನಾಡಿದರು.

ಈ ವೇಷವನ್ನು ತೆಗೆದುಹಾಕಲು ಕಾಲ ಸನ್ನಿಹಿತವಾಯಿತು. ಚಂಡಾಲನು ನಿಂತಿದ್ದ ಸ್ಥಳದಲ್ಲಿ ಈಗ ವಿಶ್ವನಾಥನಾದ ಪರಶಿವನು ನಿಂತಿದ್ದನು. ನಾಯಿಗಳು ತಮ್ಮ ಮೂಲ ಸ್ವರೂಪವಾದ ವೇದಗಳಾಗಿ ಕಂಗೊಳಿಸಿದುವು. ಶಂಕರರು ಪರಮಾತ್ಮನಿಗೆ ನಮಸ್ಕರಿಸಿ ಪರಮಸತ್ಯದ ವಿಷಯವಾಗಿ ಹೀಗೆ ಹೇಳಿದರು: 'ದೇಹದ ದೃಷ್ಟಿಯಿಂದ, ಓ ಶಿವನೇ, ನಾನು ನಿನ್ನ ಸೇವಕ. ಆತ್ಮದ ದೃಷ್ಟಿಯಿಂದ, ತ್ರಿನೇತ್ರನೇ, ನಾನು ನಿನ್ನಂಶ. ಪರಮಾತ್ಮನೇ, ಆತ್ಮದ ದೃಷ್ಟಿಯಿಂದ ನಾನೇ ನೀನು. ಎಲ್ಲ ಶಾಸ್ತ್ರಗಳ ಸಹಾಯದಿಂದ ನಾನು ಅರಿತಿರುವ ಪರಮಸತ್ಯವಿದು'.

ಪರಮಶಿವನಿಗೆ ತುಂಬ ಸಂತೋಷವಾಯಿತು. ಆಧ್ಯಾತ್ಮಿಕ ಅದ್ವೈತವನ್ನು ಪುನಃ ಸ್ಥಾಪಿಸಿದ ಯಶಸ್ವೀಕಾರ್ಯಕ್ಕಾಗಿ ಶಂಕರರನ್ನು ಆಶೀರ್ವಾದದಿಂದ ಅನುಗ್ರಹಿಸಿ ಯಾವ ನಿರಾಕಾರತ್ವದಿಂದ ರೂಪುತಳೆದಿದ್ದನೋ ಆ ನಿರಾಕಾರದಲ್ಲಿ ಲೀನನಾದನು.[1]

ಚಂಡಾಲನ ವೇಷದಲ್ಲಿ ಬಂದಿದ್ದ ಪರಶಿವನ ಆಜ್ಞೆಯಂತೆ ಶಂಕರರು ಹಿಮಾಲಯದಲ್ಲಿದ್ದ ಬದರಿಕಾಶ್ರಮಕ್ಕೆ ಪ್ರಯಾಣಮಾಡಿ ವ್ಯಾಸಮಹರ್ಷಿಗಳ ಆಶೀರ್ವಾದವನ್ನು ಪಡೆದರು. ಇಲ್ಲಿಯೇ ಅವರು ತಮ್ಮ ಪರಮಗುರುವಾದ ಗೌಡಪಾದರನ್ನೂ ಕಂಡು ಅವರ ಆಶೀರ್ವಾದವನ್ನು ಪಡೆದರು. ಆ ಬಳಿಕ ಅವರು ಕಾಶಿಗೆ ಹೋಗಿ, ಅಲ್ಲಿಯೇ ತಮ್ಮ ಭಾಷ್ಯಗಳನ್ನೂ ಇತರ ಸ್ವಂತ ಸ್ತೋತ್ರ ಗ್ರಂಥಗಳನ್ನೂ ಬರೆದರು. ಅವರು ತಮ್ಮ ಗ್ರಂಥಗಳನ್ನು ಮುಕ್ತಿ ಮಂಡಪ ಮತ್ತು

---

1.ನೋಡಿ: ಟಿ.ಎಂ.ಪಿ. ಮಹದೇವನ್ ಅವರ *"The Wisdom of Unity"* (ಮಾನಿಷಪಂಚಕಂ); (ಗಣೇಶ್ ಮತ್ತು ಕಂಪೆನಿ, ಮದ್ರಾಸು-17, 1967).

ಮಣಿಕರ್ಣಿಕಾಘಟ್ಟಗಳಲ್ಲಿ ಬರೆದರೆಂದೂ ಅಲ್ಲಿಯೇ ತಮ್ಮ ಶಿಷ್ಯರಿಗೆ ಅವುಗಳನ್ನು ಬೋಧಿಸಿದರೆಂದೂ ಹೇಳುತ್ತಾರೆ.[1]

ಒಂದು ಸಂಪ್ರದಾಯದ ಪ್ರಕಾರ ಶಂಕರರು ಮೊದಲು ವಿಷ್ಣುಸಹಸ್ರನಾಮದ ಮೇಲೆ ಭಾಷ್ಯವನ್ನು ಬರೆದು ಆ ಬಳಿಕ ಉಪನಿಷತ್ತು, ಭಗವದ್ಗೀತೆ ಮತ್ತು ಬ್ರಹ್ಮಸೂತ್ರಗಳೆಂಬ ಪ್ರಸ್ಥಾನತ್ರಯದ ಮೇಲೆ ಭಾಷ್ಯಗಳನ್ನು ಬರೆದರು. ಒಮ್ಮೆ ಬ್ರಹ್ಮಸೂತ್ರಭಾಷ್ಯವನ್ನು ಶಂಕರರು ಪ್ರತಿಪಾದಿಸುತ್ತಿದ್ದಾಗ ವ್ಯಾಸರು ಒಬ್ಬ ಮುದುಕನ ವೇಷದಲ್ಲಿ ಬಂದು ಶಂಕರರನ್ನು ಅವರ ವಾದವನ್ನು ಮಂಡಿಸುವಂತೆ ಹೇಳಿದರು. ಇವರಿಬ್ಬರ ನಡುವೆ ವಾದವಿವಾದಗಳು ನಾಲ್ಕು ದಿನಗಳವರೆಗೂ ನಡೆದುವು. ಕೊನೆಗೆ, ಬ್ರಹ್ಮಸೂತ್ರಕಾರರಾದ ವ್ಯಾಸರೇ ವೇಷಧರಿಸಿ ಬಂದಿದ್ದಾರೆಂದು ಪದ್ಮಪಾದರು ಊಹಿಸಿದರು. ಅವರು ಮುದುಕನನ್ನೂ ಶಂಕರರನ್ನೂ ಪ್ರಾರ್ಥಿಸಿ, ಶಿವನ ಅವತಾರವಾದ ಶಂಕರರೂ ವಿಷ್ಣುವಿನ ಅವತಾರವಾದ ವ್ಯಾಸರೂ ಪರಸ್ಪರ ವಾದಮಾಡುತ್ತಾ ಕುಳಿತರೆ ಶಾಂತಿಯೇ ಇರುವುದಿಲ್ಲವೆಂದು ಹೇಳಿ ವಾದವಿವಾದಗಳನ್ನು ನಿಲ್ಲಿಸುವಂತೆ ಕೇಳಿಕೊಂಡರು. ತಾವು ಯಾರೆಂಬುದು ಹೀಗೆ ವ್ಯಕ್ತವಾದ ಬಳಿಕ ವ್ಯಾಸರು ಶಂಕರರ ಭಾಷ್ಯವನ್ನು ಒಪ್ಪಿ, ಅವರನ್ನು ಆಶೀರ್ವದಿಸಿ ಅವರ ಆಯುಃ ಪ್ರಮಾಣವನ್ನು ಹದಿನಾರರಿಂದ ಮೂವತ್ತೆರಡು ವರ್ಷಗಳವರೆಗೆ ಹೆಚ್ಚಿಸಿದರು. ಅಲ್ಲದೆ, ಶಂಕರರು ಭಾರತದಲ್ಲೆಲ್ಲ ಸುತ್ತಿ ವೇದಾಂತದ ತತ್ವವನ್ನು ಜನರಲ್ಲಿ ಪ್ರಚಾರಮಾಡಬೇಕೆಂದು ಅಪೇಕ್ಷಿಸಿದರು.

ಶಂಕರರು ಕಾಶಿಯಲ್ಲಿದ್ದಾಗ ನಡೆದ ಘಟನೆಯೊಂದು ಭಜಗೋವಿಂದ ಸ್ತೋತ್ರ ರಚನೆಗೆ ಸಂಬಂಧಪಟ್ಟುದು. ಶಂಕರರು ತಮ್ಮ ಶಿಷ್ಯರೊಡನೆ ಒಂದು ಬೀದಿಯಲ್ಲಿ ಹೋಗುತ್ತಿದ್ದರು. ಒಬ್ಬ ಮುದಿ ವಿದ್ವಾಂಸನು ವ್ಯಾಕರಣ ಸ್ತೋತ್ರಗಳನ್ನು ಹೇಳುತ್ತಿರುವುದು ಅವರಿಗೆ ಕೇಳಿಸಿತು. ಆ ವೈಯಾಕರಣನ ಮೇಲೆ ಕರುಣೆ ಹುಟ್ಟಿ ಅವರು ಅವನ ಬಳಿಗೆ ಹೋಗಿ ಪ್ರಶಸ್ತವಾದ ಕಾಲವನ್ನು ವ್ಯಾಕರಣಕ್ಕಾಗಿ ವ್ಯಯಮಾಡದೆ ಪರಮಾತ್ಮನ ಪೂಜೆ, ಸ್ತೋತ್ರ ಮುಂತಾದುವುಗಳ ಕಡೆಗೆ ಮನಸ್ಸುಮಾಡಬೇಕೆಂದು ಉಪದೇಶಿಸಿದರು. ಈ ಸಮಯದಲ್ಲಿಯೇ ಭಜಗೋವಿಂದ ಸ್ತೋತ್ರವು ರಚಿತವಾಯಿತು. 'ಭಜಗೋವಿಂದಂ' ಎಂದು ಮೊದಲಾಗುವ ಸ್ತೋತ್ರದ ಪಲ್ಲವಿಯೊಂದೇ ಅಲ್ಲದೆ, ಶಂಕರರು ಹನ್ನೆರಡು ವೃತ್ತಗಳನ್ನೂ ರಚಿಸಿದರು. ಆದುದರಿಂದಲೇ ಅದಕ್ಕೆ ದ್ವಾದಶ ಮಂಜರಿಕಾಸ್ತೋತ್ರ ಎಂದು ಹೆಸರು (ಹನ್ನೆರಡು ವೃತ್ತಪುಷ್ಪಗಳ ಗೊಂಚಲು ಎಂದರ್ಥ). ಈ ಸಮಯದಲ್ಲಿ ಗುರುಗಳೊಡನೆ ಇದ್ದ ಹದಿನಾಲ್ಕು ಜನ ಶಿಷ್ಯರು ಪ್ರತಿಯೊಬ್ಬರೂ ಒಂದೊಂದು ಶ್ಲೋಕವನ್ನು ಸೇರಿಸಿದರೆಂದು ಹೇಳುತ್ತಾರೆ. ಶಂಕರರ ಭಜಗೋವಿಂದ ಸ್ತೋತ್ರವು ಗೋವಿಂದನನ್ನು ಸ್ತುತಿಸುವ

1. ಮಾಧವೀಯ ಶಂಕರವಿಜಯದ ಪ್ರಕಾರ ಶಂಕರರು ತಮ್ಮ ಭಾಷ್ಯಗಳನ್ನು ಬದರಿಕಾಶ್ರಮದಲ್ಲಿ ಬರೆದರು.

ಸ್ತೋತ್ರ ಮಾತ್ರವಲ್ಲ (ಶಂಕರರ ಗುರುಗಳ ಹೆಸರೂ ಗೋವಿಂದ ಎಂಬುದು). ಅದು ಅದ್ವೈತವೇದಾಂತದ ಕೈಪಿಡಿಯಾಗಿದೆ. ಅದ್ವೈತ ತತ್ವವನ್ನು ಶಿಷ್ಯರು ಅರ್ಥಮಾಡಿಕೊಳ್ಳಲು ಬೇಕಾದ ಪ್ರಮುಖ ವಿಚಾರವನ್ನೆಲ್ಲ ಇದರಲ್ಲಿ ಹೇಳಿದ್ದಾರೆ. ಅಸ್ಥಿರವಾದ ವಸ್ತುಗಳಮೇಲಿರುವ ಅಪೇಕ್ಷೆಯನ್ನು ತ್ಯಜಿಸಬೇಕು; ಜೀವ, ಆಸ್ತಿ, ಸಂಸಾರ, ಮಕ್ಕಳುಮರಿ ಮುಂತಾದುವುಗಳ ನಶ್ವರತೆಯನ್ನು ಕುರಿತು ಚಿಂತಿಸಬೇಕು; ದುರಾಸೆ, ಅಹಂಕಾರ ಮುಂತಾದ ಅವಗುಣಗಳನ್ನು ಗೆಲ್ಲಬೇಕು; ತೃಪ್ತಿ, ಸಮಚಿತ್ತತೆ, ಶ್ರದ್ಧೆ ಮುಂತಾದುವುಗಳನ್ನು ಅಭ್ಯಾಸಮಾಡಬೇಕು; ಪ್ರಪಂಚವು ಮಾಯೆಯ ಇಂದ್ರಜಾಲ; ಆತ್ಮವೊಂದೇ ಅವಿನಾಶಿ; ಮುಂತಾದುವುಗಳನ್ನೆಲ್ಲಾ ಅರ್ಥ ಮಾಡಿಕೊಳ್ಳಬೇಕು ಎಂದು ಹೇಳಿದ್ದಾರೆ.

ವೈಯಾಕರಣನನ್ನು ಕುರಿತು ಶಂಕರರು ಹೇಳುತ್ತಾರೆ: 'ಪರಮಾತ್ಮನನ್ನು ಭಜಿಸು, ನಶ್ವರಕ್ಕೆ ಅಂಟಿಕೊಳ್ಳುವುದರಿಂದ ಮುಕ್ತಿ ದೊರಕುವುದಿಲ್ಲ; ಶಾಶ್ವತ ವಸ್ತುವಿನ ಭಕ್ತಿಯೊಂದೇ ಮಾರ್ಗ. ಅಲ್ಪ ವಿಷಯಗಳು ನಮ್ಮನ್ನು ರಕ್ಷಿಸುತ್ತವೆಂದು ನಂಬುವುದು ಭ್ರಮೆ. ಅಂಥ ಮನುಷ್ಯನ ಮನಸ್ಸು ಮಾಯೆಗೆ ಒಳಗಾಗಿರುತ್ತದೆ. ಅಂಥವನು ಮೂಢಮತಿ. ದೇವರನ್ನು ಕುರಿತು ಚಿಂತಿಸುವುದನ್ನು ಮುಂದುಹಾಕುವುದೂ ಭ್ರಮೆಯೇ. ಭಕ್ತಿ, ಪೂಜಾಕ್ರಮಗಳಿಂದ ತನನ್ನು ಸಿದ್ಧಗೊಳಿಸದೆ ಹೋದವನಿಗೆ ಸಾವು ಹತ್ತಿರ ಬಂದಾಗ ಮನಸ್ಸನ್ನು ದೇವರೆಡೆಗೆ ತಿರುಗಿಸುವುದು ಸಾಧ್ಯವಾಗುವುದಿಲ್ಲ'. ಶಂಕರರು ಮುಕ್ತಿ ಮಾರ್ಗವನ್ನು ನಿರೂಪಿಸುತ್ತಾ ಹೀಗೆ ಹೇಳುತ್ತಾರೆ: 'ದೈವಸಾನ್ನಿಧ್ಯದಿಂದ ವೈರಾಗ್ಯವನ್ನುಂಟುಮಾಡುತ್ತದೆ; ವೈರಾಗ್ಯದಿಂದ ಮಾಯೆಯಿಂದ ಮುಕ್ತಿಯುಂಟಾಗುತ್ತದೆ; ಮಾಯಾಮುಕ್ತಿಯಿಂದ ಶ್ರದ್ಧೆ ಬೆಳೆಯುತ್ತದೆ; ಶ್ರದ್ಧೆಯಿಂದ ಜೀವನ್ಮುಕ್ತಿಯುಂಟಾಗುತ್ತದೆ.'[1]

---

1.ನೋಡಿ: ಶಂಕರರ *ಭಜಗೋವಿಂದಂ* (ಗಣೇಶ್ ಮತ್ತು ಕಂಪೆನಿ, ಮದ್ರಾಸು -17, 1962).

# 3. ವಿಜಯ ಯಾತ್ರೆ

ವಿಜಯಯಾತ್ರೆಯನ್ನು ಕೈಗೊಳ್ಳುವ ಕಾಲವು ಈಗ ಶಂಕರರಿಗೆ ಒದಗಿಬಂದಿತ್ತು. ಅವರು ಎದುರಿಸಬೇಕಾಗಿದ್ದ ವಿರೋಧವು ಸಂಪ್ರದಾಯಸ್ಥರ ಗುಂಪುಗಳ ಒಳಗೂ ಹೊರಗೂ ಇದ್ದುವು. ಸೋತವರು ಏನೂ ಕಳೆದುಕೊಳ್ಳದೆ ಎಲ್ಲವನ್ನೂ ಗೆಲ್ಲಬಹುದಾದ ಸಂಗ್ರಾಮವಾಗಿದ್ದಿತು ಇದು. ಸಂಪ್ರದಾಯವಾದಿಗಳು ಮತ್ತು ಸಂಪ್ರದಾಯ ವಿರೋಧಿಗಳು ತಮ್ಮತಮ್ಮ ಆಚಾರಗಳಲ್ಲಿದ್ದ ವಿಷಮತೆಯನ್ನೂ ನಂಬಿಕೆಗಳಲ್ಲಿದ್ದ ತಪ್ಪುಗಳನ್ನೂ ತಿಳಿದುಕೊಳ್ಳುವಂತೆ ಶಂಕರರು ಮಾಡಿದುದರಿಂದ ಆ ಎರಡು ಗುಂಪಿನವರಿಗೂ ನಿಜವಾದ ಪ್ರಾಧಾನ್ಯವು ಅಧಿಕಗೊಂಡತಾಗಿತ್ತು.

ಈ ಸಮಯದಲ್ಲಿ ಪೂರ್ವಮೀಮಾಂಸಾ ಸಂಪ್ರದಾಯವು ವ್ಯಾಪಕವೂ ಶಕ್ತಿಯುಕ್ತವೂ ಆದ ಪಂಥವಾಗಿತ್ತು. ಈ ಪಂಥದ ಪ್ರಕಾರ ಎಲ್ಲ ವೇದಗಳ ಸಾರವೇ ಕರ್ಮ ಅಥವಾ ಮತಧರ್ಮವಾಗಿತ್ತು; ಅದ್ವೈತವಾದ ಆತ್ಮವಲ್ಲ. ಮೀಮಾಂಸಾ ಶಾಸ್ತ್ರದ ಅನುಯಾಯಿಗಳು ನಂಬಿದ್ದ ವೇದಾರ್ಥದ ತಲೆಕೆಳಗು ಅಭಿಪ್ರಾಯವನ್ನು ಶಂಕರರು ಮೊದಲು ಸರಿಪಡಿಸಬೇಕಾಯಿತು. ಕುಮಾರಿಲಭಟ್ಟರೆಂಬ ಈ ಪಂಥದ ಅತಿಶ್ರೇಷ್ಠ ಪ್ರತಿಪಾದಕರು ಪ್ರಯಾಗದಲ್ಲಿ ವಾಸಿಸುತ್ತಿದ್ದರು. ಸಂಪ್ರದಾಯವಾದಿಗಳ ಪ್ರಕಾರ ಕುಮಾರಿಲರು ಶಿವಪಾರ್ವತಿಯರ ಎರಡನೆಯ ಮಗನಾದ ಸುಬ್ರಹ್ಮಣ್ಯಸ್ವಾಮಿಯ ಅವತಾರವಾಗಿದ್ದರು. ಬೌದ್ಧತತ್ವಗಳನ್ನು ಖಂಡಿಸಿ ವೇದಧರ್ಮವನ್ನು ಪುನಃ ಸ್ಥಾಪನೆ ಮಾಡುವುದೇ ಈ ಅವತಾರದ ಉದ್ದೇಶವಾಗಿತ್ತು. ಯುವಕರಾಗಿದ್ದಾಗ ಕುಮಾರಿಲರು ಬೌದ್ಧರಂತೆ ನಡೆದುಕೊಂಡು ಬೌದ್ಧ ಮಠವೊಂದರಲ್ಲಿ ಬೌದ್ಧಧರ್ಮವನ್ನು ವ್ಯಾಸಂಗ ಮಾಡಿದರು. ಆ ಧರ್ಮವನ್ನು ಗುರುಮುಖೇಣ ನೇರವಾಗಿ ಅಭ್ಯಾಸ ಮಾಡಿದರೆ ಆ ಬಳಿಕ ಆ ತತ್ವಗಳನ್ನು ಖಂಡಿಸುವುದು ಪರಿಣಾಮಕಾರಿಯಾಗಿರುತ್ತಿತ್ತು. ವಾದಗಳಲ್ಲಿ ಬೌದ್ಧ ವಿದ್ವಾಂಸರನ್ನೇ ಸೋಲಿಸಿ ವೇದಗಳ ಪ್ರಾಮಾಣ್ಯವನ್ನು ಪುನಃ ಸ್ಥಾಪಿಸಿ ಅವುಗಳಲ್ಲಿ ನಿರೂಪಿತವಾಗಿರುವ ಕರ್ಮಗಳ ಪವಿತ್ರತೆಯನ್ನು ಎತ್ತಿ ಹಿಡಿದರು. ವೇದಗಳ ನಿರಾಲಂಬತೆಯನ್ನೂ ಸ್ವಪ್ರಾಮಾಣ್ಯವನ್ನೂ ರಕ್ಷಿಸುವುದಕ್ಕಾಗಿ ಸರ್ವಶಕ್ತನೂ ಸರ್ವಜ್ಞನೂ ಆದ ಪರಮಾತ್ಮನನ್ನು ಆಧಾರವಾಗಿ ಇಟ್ಟುಕೊಳ್ಳಬೇಕಾಗಿಲ್ಲವೆಂದೂ ವಾದಮಾಡುತ್ತಿದ್ದರು.

ಶಂಕರರು ಕಾಶಿಕ್ಷೇತ್ರವನ್ನು ಬಿಟ್ಟು ಗಂಗಾ, ಯಮುನಾ ಮತ್ತು ಭೂಮ್ಯಂತರ್ಗತ ಸರಸ್ವತೀ ನದಿಗಳ ಸಂಗಮಸ್ಥಳವಾದ ಪ್ರಯಾಗಕ್ಕೆ ಹೋದರು.[1] ಅಲ್ಲಿಗೆ ಹೋಗುವ

---

1.ಚಿದ್ವಿಲಾಸನು ಈ ಪ್ರದೇಶದ ಹೆಸರು 'ರುದ್ದ' ಎಂದೂ, ಅಲ್ಲಿ ಭದ್ರಸೇನ ಎಂಬುವನು ರಾಜನಾಗಿದ್ದನೆಂದೂ ಹೇಳುತ್ತಾನೆ. ಆನಂದಗಿರಿಯು 'ರುದ್ರಪುರ'ವೆಂದು ಹೇಳುತ್ತಾನೆ.

ಉದ್ದೇಶ ಕುಮಾರಿಲಭಟ್ಟರನ್ನು ಕಂಡು ವೇದಾಂತದ ಸತ್ಯವನ್ನು ತಿಳಿಸಿ ಅವರನ್ನು ಒಪ್ಪಿಸಿ ತಮ್ಮ ಬ್ರಹ್ಮಸೂತ್ರ ಭಾಷ್ಯಕ್ಕೆ ಅವರಿಂದಲೇ ಒಂದು ವಾರ್ತಿಕವನ್ನು ಬರೆಸುವುದಾಗಿತ್ತು. ಆದರೆ ಪ್ರಯಾಗಕ್ಕೆ ಹೋದ ಕೂಡಲೇ ಮೀಮಾಂಸಾಶಾಸ್ತ್ರದ ಅದ್ಭುತ ಪ್ರತಿಪಾದಕರಾಗಿದ್ದ ಕುಮಾರಿಲರು ತುಷಾಗ್ನಿಯಲ್ಲಿ ತಮ್ಮ ದೇಹವನ್ನು ಬಲಿಕೊಡುತ್ತಿದ್ದರೆಂದು ಶಂಕರರಿಗೆ ಗೊತ್ತಾಯಿತು. ಕುಮಾರಿಲರು ತಾವು ಮಾಡಿದ್ದ ಎರಡು ದೊಡ್ಡ ಪಾಪಗಳ ಪರಿಹಾರಕ್ಕಾಗಿ ಇಂಥ ಘೋರ ಕಾರ್ಯವನ್ನು ಕೈಗೊಂಡಿದ್ದರು. ಬೌದ್ಧಮತಾಚಾರ್ಯರಿಗೆ ತಾವು ಮಾಡಿದ್ದ ಮೋಸ ಮತ್ತು ಮೀಮಾಂಸಕರಾಗಿ ಪರಮಾತ್ಮನ ಅಸ್ತಿತ್ವವನ್ನೇ ನಿರಾಕರಿಸಿದ್ದುದು–ಇವೆರಡೂ ಅವರ ಪಾಪವಾಗಿದ್ದಿತು. ಈ ಪ್ರಾಯಶ್ಚಿತ್ತ ಕಾರ್ಯ ನಡೆಯುತ್ತಿದ್ದ ಸ್ಥಳಕ್ಕೆ ಶಂಕರರು ಧಾವಿಸಿದರು. ಕುಮಾರಿಲರ ದೇಹವು ಆಗಲೇ ಸುಟ್ಟುಹೋಗುತ್ತಿತ್ತು. ಆದರೂ ಅವರ ಮನಸ್ಸು ಮಾತ್ರ ಶಾಂತವಾಗಿ ಪ್ರಜ್ಞಾಪೂರ್ಣವಾಗಿತ್ತು. ಅವರು ತಮ್ಮ ಪ್ರಾಯಶ್ಚಿತ್ತಕಾರ್ಯವು ಆಗಲೇ ಪ್ರಾರಂಭವಾಗಿಹೋಗಿರುವುದರಿಂದ ಮತ್ತೆ ಅದರಿಂದ ಹಿಂದೆಗೆಯುವುದು ಸಾಧ್ಯವಿಲ್ಲವೆಂದು ಶಂಕರರಿಗೆ ಹೇಳಿದರು. ಆದರೂ ಕೊನೆ ಗಳಿಗೆಯಲ್ಲಿ ಶಂಕರರ ಸನ್ನಿಧಿಯಲ್ಲಿರುವುದು ಅವರಿಗೆ ಸಂತೋಷಕರವಾಗಿತ್ತು. ವೇದಾಂತ ಸತ್ಯದ ಬಗ್ಗೆ ಅವರಿಗೆ ಸಂಪೂರ್ಣ ನಂಬಿಕೆಯಾಗಿತ್ತು. ಪೂರ್ವಮೀಮಾಂಸದ ಕೊರತೆಯನ್ನು ಪ್ರದರ್ಶಿಸುವುದಕ್ಕಾಗಿ ಶಂಕರರು ಮಾಹಿಷ್ಮತಿಗೆ ಹೋಗಿ ವೇದಗಳಲ್ಲಿಯೂ ವಾದದಲ್ಲಿಯೂ ಪಂಡಿತರಾದ, ಮೀಮಾಂಸಕರಲ್ಲಿ ಅಚಲರಾದ ಮಂಡನಮಿಶ್ರರೊಡನೆ ವಾದಮಾಡಬೇಕೆಂದು ಕುಮಾರಿಲರು ಸೂಚಿಸಿದರು.

ಶಂಕರರು ತಮ್ಮ ಶಿಷ್ಯರೊಡಗೂಡಿ ಮಂಡನಮಿಶ್ರರು ವಾಸಿಸುತ್ತಿದ್ದ ಮಾಹಿಷ್ಮತೀ ನಗರಕ್ಕೆ ಹೊರಟರು.[1] ಮಾಧವೀಯ ಶಂಕರವಿಜಯದಲ್ಲಿ ಮಂಡನರು ಶ್ರೇಷ್ಠ ವೈದಿಕ ವಿದ್ವಾಂಸರಾಗಿದ್ದರೆಂಬುದಕ್ಕೂ ಮೀಮಾಂಸೆಯ ಕರ್ಮಮಾರ್ಗವನ್ನು ಶ್ರದ್ಧೆಯಿಂದ ಅನುಸರಿಸುತ್ತಿದ್ದರೆಂಬುದಕ್ಕೂ ಎರಡು ಸೂಚನೆಗಳನ್ನು ಕೊಡಲಾಗಿದೆ. ಮಂಡನರ ಮನೆಯ ದ್ವಾರಮಂಟಪದಲ್ಲಿ ಪಂಜರದಲ್ಲಿದ್ದ ಗಿಳಿಗಳು 'ಜ್ಞಾನಕ್ಕೆ ಪ್ರಮಾಣವು ಸಹಜವೋ ಅಲ್ಲವೋ? ಕರ್ಮವು ಫಲದಾಯಿಯೋ ಪರಮಾತ್ಮನೋ? ಈ ವಿಶ್ವವು ಶಾಶ್ವತವೋ ನಶ್ವರವೋ?' ಮುಂತಾದ ವಾಕ್ಯಗಳನ್ನು ಪುನಃ ಪುನಃ ಉಚ್ಚರಿಸುತ್ತಿದ್ದುವು.[2] ಶಂಕರರು ಮನೆಯ ಬಳಿಗೆ ಬಂದಾಗ ಮನೆಗೆ ಒಳಗಡೆಯಿಂದ

---

1. ಮಂಡನರು ವಾಸಿಸುತ್ತಿದ್ದ ಸ್ಥಳವನ್ನು ಬೇರೆ ಬೇರೆಯಾಗಿ ನಿರೂಪಿಸಲಾಗಿದೆ. 'ಮಾಧವೀಯ ಶಂಕರವಿಜಯ'ದಂತೆ ಅದು ವಿದರ್ಭ ದೇಶ, 'ಚಿದ್ವಿಲಾಸೀಯ'ದಂತೆ ಕಾಶ್ಮೀರ. 'ವ್ಯಾಸಾಚಲೀಯ'ದಂತೆ ಮಗಧ. ಆನಂದಗಿರಿಯು ಆ ಸ್ಥಳವನ್ನು ಹಸ್ತಿನಾಪುರದ ಬಳಿಯ 'ವಿದ್ಯಾಲಯ' ಎಂದು ಹೇಳುತ್ತಾನೆ. ಇದಕ್ಕೆ 'ಬಿಜಿಲಬಿಂದು' ಎಂದು ಹೆಸರು.

2. ಆನಂದಗಿರಿಯ ಶಂಕರವಿಜಯದಲ್ಲಿ ಈ ಗಿಳಿಗಳು ಮಾತಾಡುತ್ತಿದ್ದ ವಿಷಯಗಳ ಬಗ್ಗೆ ಇದಕ್ಕಿಂತ ದೊಡ್ಡ ಪಟ್ಟಿಯಿದೆ.

ಅಗಳಿಹಾಕಿತ್ತು. ಮಂಡನರು ಶ್ರಾದ್ಧಮಾಡುವುದರಲ್ಲಿ ನಿರತರಾಗಿದ್ದರು. ಶಂಕರರು ಈ ಸಮಯದಲ್ಲಿ ತಮ್ಮ ಯೋಗಶಕ್ತಿಯನ್ನು ಪ್ರದರ್ಶಿಸಿ ಮನೆಯನ್ನು ಪ್ರವೇಶಿಸಿದರೆಂದು ಹೇಳುತ್ತಾರೆ. 'ವಿಶ್ವರೂಪ' ಎಂದೂ ಹೆಸರಾಗಿದ್ದ ಮಂಡನರು ಸನ್ಯಾಸಿಯನ್ನು ಕಂಡು ಕಡುಗೋಪಗೊಂಡರು. ಇಹಲೋಕವನ್ನು ಬಿಟ್ಟ ಪಿತೃದೇವತೆಗಳಿಗೆ ಪವಿತ್ರ ಕರ್ಮಗಳ ಮೂಲಕ ಶ್ರಾದ್ಧಮಾಡುತ್ತಿದ್ದಾಗ ಶಂಕರರು ಅಲ್ಲಿಗೆ ಬರಬೇಕಾಗಿದ್ದುದೇನೂ ಇಲ್ಲವೆಂದು ಅವಾಚ್ಯವಾಗಿ ಬೈದರು. 'ಕರ್ಮಸಂನ್ಯಾಸಮಾಡಿದ್ದ ಶಂಕರರು ಕರ್ಮಗಳು ನೆರವೇರುತ್ತಿದ್ದ ಮನೆಗೆ ಬಂದದ್ದಾದರೂ ಏಕೆ ?' ಸಂನ್ಯಾಸಾಶ್ರಮ ಮತ್ತು ವೇದಾಂತಗಳ ಬಗ್ಗೆ ತಮಗೆ ದ್ವೇಷವಿದ್ದುದರಿಂದ ಶ್ರಾದ್ಧಕರ್ಮವನ್ನು ಮಾಡುವವರು ಮನಃಶ್ಶಾಂತಿಯನ್ನು ಕಳೆದುಕೊಳ್ಳಬಾರದೆಂಬ ಧರ್ಮಶಾಸ್ತ್ರ ನಿಯಮವನ್ನು ಬಲ್ಲವರಾಗಿದ್ದರೂ ಮಂಡನಮಿಶ್ರರು ಕೋಪಕ್ಕೆ ಒಳಗಾಗಿದ್ದರು. ದೇವ ಪಿತೃಸ್ಥಾನಗಳಿಗೆ ಶ್ರಾದ್ಧಕ್ಕೆ ನಿಮಂತ್ರಿತರಾಗಿ ಅಲ್ಲಿದ್ದ ವ್ಯಾಸ ಜೈಮಿನಿಗಳು[1] ಮಂಡನರನ್ನು ಕೋಪವನ್ನು ಬಿಡುವಂತೆ ಬೋಧಿಸಿ, ಶ್ರಾದ್ಧ ಸಮಯದಲ್ಲಿ ಸತ್ಕಾರವನ್ನು ಸ್ವೀಕರಿಸಬೇಕೆಂದು ಶಂಕರರನ್ನು ಪ್ರಾರ್ಥಿಸಿದರು. ಮಂಡನರು ತಮ್ಮ ತಪ್ಪನ್ನು ತಿಳಿದುಕೊಂಡು ಶ್ರಾದ್ಧಭೋಜನದಲ್ಲಿ ಭಾಗಿಯಾಗಬೇಕೆಂದು ಶಂಕರರನ್ನು ಪ್ರಾರ್ಥಿಸಿದ್ದರು. ತಾವು ಭಿಕ್ಷಕ್ಕಾಗಿ ಬರಲಿಲ್ಲವೆಂದೂ ಮಂಡನರೊಡನೆ ವಾದಕ್ಕಾಗಿ ಬಂದಿದ್ದರೆಂದೂ ಶಂಕರರು ಹೇಳಿದರು. ಮಂಡನರು ವಾದದ ಆಹ್ವಾನವನ್ನು ಸ್ವೀಕರಿಸಿ ಮಾರನೆಯ ದಿನ ಅದು ಮೊದಲಾಗಬಹುದೆಂದು ಹೇಳಿದರು. ಮಂಡನರು ಸೋತರೆ ಸಂನ್ಯಾಸಿಯಾಗಿ ವೇದಾಂತಮಾರ್ಗವನ್ನು ಅನುಸರಿಸಬೇಕೆಂದೂ, ಶಂಕರರು ಸೋತರೆ ತಕ್ಕ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡು ಶ್ವೇತವಸ್ತ್ರವನ್ನುಟ್ಟು ಕರ್ಮಮಾರ್ಗದ ಅನುಯಾಯಿಯಾಗಬೇಕೆಂದೂ ಪಣವಾಯಿತು. ಈ ಶ್ರೇಷ್ಠ ವಾದವಿವಾದಗಳಲ್ಲಿ ಜಯಾಪಜಯಗಳ ನಿರ್ಣಯಕ್ಕಾಗಿ ಮಹಾವಿದುಷಿ ಎಂದು ಕೀರ್ತಿಶಾಲಿನಿಯಾಗಿದ್ದ ಮಂಡನಮಿಶ್ರರ ಪತ್ನಿ ಸರಸವಾಣಿಯೇ[2] ಮಧ್ಯಸ್ಥಳಾಗಿರಬೇಕೆಂದು ನಿಯೋಜಿಸ ಲಾಯಿತು. ಒಂದೊಂದು ಪುಷ್ಪಮಾಲೆಯನ್ನು ಧರಿಸುವಂತೆ ಮಾಡಿ, ಯಾರ ಮಾಲೆಯು ಮೊದಲು ಬಾಡುತ್ತದೆಯೋ ಅವರು ಸೋತರೆಂದು ಪರಿಗಣಿಸಬಹುದೆಂದು ಹೇಳಿ ತನ್ನ ಮನೆಗೆಲಸಕ್ಕೆ ಹೊರಟುಹೋದಳು.

ಇವರ ವಾದವು ವೇದಗಳ ಅರ್ಥವನ್ನು ಕುರಿತಾಗಿತ್ತು. ಮಂಡನರು ಮೀಮಾಂಸಕರ ವಾದವನ್ನು ಸ್ಥಿರೀಕರಿಸಲೂ ಶಂಕರರು ಅದ್ವೈತವೇದಾಂತವನ್ನು ದೃಢಪಡಿಸಲೂ ಸಿದ್ಧರಾದರು. ಪ್ರತಿನಿತ್ಯವೂ ಸರಸವಾಣಿಯು ಅವರನ್ನು ಭೋಜನಕ್ಕೆ ಎಬ್ಬಿಸುವಾಗ

---

1.ಆನಂದಗಿರಿಯು ಶ್ರಾದ್ಧದಲ್ಲಿದ್ದವರು ವ್ಯಾಸರೊಬ್ಬರೇ ಎಂದು ಹೇಳುತ್ತಾನೆ.

2.ಸಂಪ್ರದಾಯದ ಪ್ರಕಾರ ಸರಸವಾಣಿಯು ಸರಸ್ವತಿಯ ಅವತಾರವಾಗಿದ್ದಳು. ಆಕೆಗೆ ಇರುವ ಹೆಸರುಗಳು ಹೀಗಿವೆ: ಭಾರತಿ, ಉಭಯಭಾರತಿ, ದ್ವಯಭಾರತಿ, ಶಾರದಾ.

ತನ್ನ ಗಂಡನಿಗೆ "ಏಳಿ ಭೋಜನಕ್ಕೆ ದಯಮಾಡಿ" ಎಂದೂ, ಶಂಕರರಿಗೆ "ತಮ್ಮ ಭಿಕ್ಷಕ್ಕೆ ಏಳಿ" ಎಂದೂ ಹೇಳುತ್ತಿದ್ದಳು. ಪ್ರತಿನಿತ್ಯದ ವಾದಗಳು ಮುಂದುವರಿಯುತ್ತಿದ್ದಂತೆ ಮಂಡನರ ಪಕ್ಷವು ದುರ್ಬಲವಾಗುತ್ತಿರುವುದು ಸ್ಪಷ್ಟವಾಯಿತು. ಕೊನೆಗೆ ಅವರು ಧರಿಸಿದ್ದ ಹೂಮಾಲೆಯು ಬಾಡಲು ಮೊದಲಾಯಿತು. ಇದನ್ನು ಕಂಡ ಸರಸವಾಣಿಯು ತನ್ನ ಗಂಡನು ಸೋಲನ್ನು ಒಪ್ಪಿಕೊಳ್ಳಬೇಕಾದುದನ್ನೂ, ಅಲ್ಲದೆ ಪಣದಂತೆ ಸಂನ್ಯಾಸವನ್ನು ಸ್ವೀಕರಿಸಬೇಕಾಗಿರುವುದನ್ನೂ ಅರಿತುಕೊಂಡಳು. ಆದುದರಿಂದ ಆ ದಿನ ಅವರನ್ನು ಊಟಕ್ಕೇಳಿಸಬೇಕಾದಾಗ ಇಬ್ಬರನ್ನು ಒಂದೇ ರೀತಿಯಲ್ಲಿ ಆಹ್ವಾನಿಸಿದಳು: "ದಯಮಾಡಿ ಇಬ್ಬರೂ ಭಿಕ್ಷವನ್ನು ಸ್ವೀಕರಿಸಿ."[1]

ಸೋಲನ್ನು ಒಪ್ಪಿ ಅದ್ವೈತ ಸತ್ಯದ ನಿರ್ವಿವಾದ ಗುಣವನ್ನು ಗ್ರಹಿಸಿ ಮಂಡನಮಿಶ್ರರು ತಮಗೆ ಸಂನ್ಯಾಸದೀಕ್ಷೆಯನ್ನು ಕೊಡಬೇಕೆಂದೂ ತಮ್ಮನ್ನು ಶಿಷ್ಯನನ್ನಾಗಿ ಸ್ವೀಕರಿಸಬೇಕೆಂದೂ ಶಂಕರರನ್ನು ಕೇಳಿಕೊಂಡರು. ಶಂಕರರು ಅವರಿಗೆ ದೀಕ್ಷೆಯನ್ನು ಕೊಟ್ಟು, ಅವರಿಗೆ 'ಸುರೇಶ್ವರ' ಎಂಬ ಹೆಸರನ್ನಿತ್ತರು. ಆಚಾರ್ಯರ ಭಾಷ್ಯಗಳ ಮೇಲೆ ಅದರಲ್ಲಿಯೂ ಬೃಹದಾರಣ್ಯಕ ಮತ್ತು ತೈತ್ತಿರೀಯ ಉಪನಿಷತ್ತುಗಳ ಭಾಷ್ಯಗಳನ್ನು ಕುರಿತ ವಾರ್ತಿಕಗಳನ್ನು ಅವರು ಬರೆದುದರಿಂದ, ಆ ಬಳಿಕ ಅವರು ವಾರ್ತಿಕಕಾರರೆಂದು ಪ್ರಸಿದ್ಧಿಯಾದರು. ಸರಸವಾಣಿಯು ತನ್ನ ಪತಿಯ ಮಾರ್ಗವನ್ನೇ ಅನುಸರಿಸಿ ಶಂಕರರ ಪರಿವಾರದಲ್ಲಿ ಸೇರಿಕೊಂಡಳು.

ಶಂಕರರಿಗೆ ತಮ್ಮ ತಾಯಿಯ ಅವಸಾನ ಸಮೀಪಿಸಿತೆಂದು ತಿಳಿಯಿತು. ತಾವು ಆಕೆಗೆ ಮಾತುಕೊಟ್ಟಿದ್ದುದನ್ನು ನೆನೆದು ಅವರು ಕಾಲಟಿಗೆ ಬಂದರು.[2]

ಮಗನನ್ನು ನೋಡಿ ತಾಯಿಗೆ ಸಂತೋಷವಾಯಿತು. ತಾಯಿಗೆ ಶಂಕರರೇ ಗುರುವಾಗಿ ಆಧ್ಯಾತ್ಮದಲ್ಲಿ ಆಕೆಗೆ ತಿಳುವಳಿಕೆಯನ್ನಿತ್ತು ಆಕೆಯನ್ನು ಸಾವಿಗೆ ಸಿದ್ಧಪಡಿಸಿದರು. ಆಕೆ ಸಾವನ್ನು ಶಾಂತಿಯಿಂದಲೂ ವಿಶ್ವಾಸದಿಂದಲೂ ಸ್ವಾಗಿತಿಸಿದಳು. ಶಂಕರರ ನಂಟರು ಅವರ ತಾಯಿಯ ಅಪರಕರ್ಮವನ್ನು ಮಾಡಬಾರದೆಂದು ಅಡ್ಡಿಯೊಡ್ಡಿದರು. ಸನ್ಯಾಸಿಯಾದವನು ಅಪರಕರ್ಮ ಮಾಡುವುದನ್ನು ಹೇಗೆ ತಾನೇ

---

1.ಈ ಸಂದರ್ಭದಲ್ಲಿ ಶಂಕರರ ಜೀವನಚರಿತ್ರಕಾರರು ಒಂದು ಅನುಚಿತ ಪ್ರಸಂಗವನ್ನು ಸೇರಿಸಿದ್ದಾರೆ; ಸರಸವಾಣಿಯು ಶಂಕರರೊಡನೆ ವಾದವನ್ನು ಅಪೇಕ್ಷಿಸಿದಳೆಂದೂ, ಶಂಕರರು ಕಾಮಸೂತ್ರವನ್ನು ಕಲಿಯಲು ಅಮರುಕನೆಂಬ ರಾಜನ ಹೆಣದಲ್ಲಿ ಪರಕಾಯಪ್ರವೇಶ ಮಾಡಬೇಕಾಯಿತೆಂದೂ ಹೇಳುತ್ತಾರೆ.

2.ಮಾಧವೀಯ *ಶಂಕರವಿಜಯದ* ಪ್ರಕಾರ ತಮ್ಮ ತಾಯಿಯ ಅವಸಾನ ಪ್ರಾಪ್ತವಾಗಿರುವುದು ಶಂಕರರು ಶೃಂಗೇರಿಯಲ್ಲಿ ವಾಸಿಸುತ್ತಿದ್ದಾಗ ಅಂತರ್‌ಜ್ಞಾನದಿಂದ ತಿಳಿಯಿತು. ಇಲ್ಲಿಂದ ಅವರು ಕಾಲಟಿಗೆ ಹೋದರು. ಈ ಘಟನೆಯು ಕಾಶಿಯಲ್ಲಿ ಶಂಕರರು ವ್ಯಾಸರೊಡನೆ ವಾದಮಾಡಿದ ಬಳಿಕ ನಡೆಯಿತೆಂದು ವ್ಯಾಸಾಚಲನ ಮತ. ಶಂಕರರು ಕಾಶಿಯನ್ನು ಬಿಟ್ಟ ಒಡನೆಯೇ ಈ ಘಟನೆ ನಡೆಯಿತೆಂದು ಚಿದ್ವಿಲಾಸನು ಹೇಳುತ್ತಾನೆ.

ಒಪ್ಪಿಯಾರು? ಅವರಿಂದ ಕಿಂಚಿತ್ತೂ ಸಹಾಯ ಒದಗಲಿಲ್ಲ. ಶಂಕರರು ಬಾಳೆಯ ದಿಂಡಿನಿಂದ ಚಿತೆಯನ್ನು ಸಿದ್ಧಪಡಿಸಿದರು. ತಮ್ಮ ತಾಯಿಯ ಮನೆಯಿದ್ದ ತೋಟದ ಒಂದು ಮೂಲೆಯಲ್ಲಿ ಈ ಚಿತೆಯ ಮೇಲೆ ತಾಯಿಯ ಹೆಣವನ್ನು ಚೂರುಚೂರು ಮಾಡಿ ಚಿತೆಗೆ ತಂದು ಒಟ್ಟಿಲು ಮಾಡಿದರು. ತಮ್ಮ ಯೋಗಶಕ್ತಿಯಿಂದ ಆ ಚಿತೆಗೆ ಬೆಂಕಿಯಿಟ್ಟರು. ಇದರಿಂದ ಅವರ ಸಂಬಂಧಿಗಳಾದ ನಂಬೂದಿರಿಗಳಿಗೆಲ್ಲ ಒಂದು ಶಾಪ ಬಂತು; ಅದರಿಂದ ಅವರೆಲ್ಲರೂ ಹೆಣಗಳನ್ನು ಇತ್ತೀಚಿನವರೆಗೂ ಸ್ವಲ್ಪ ಕತ್ತರಿಸಿ ಬಳಿಕ ಸುಡಬೇಕಾದ ಪ್ರಸಂಗವುಂಟಾಯಿತು ಎಂದು ಹೇಳುತ್ತಾರೆ.

ಇನ್ನು ಶಂಕರರ ಸುಂಟರಗಾಳಿಯಂಥ ದಿಗ್ವಿಜಯವನ್ನು ನೋಡೋಣ. ಅವರು ಭಾರತವನ್ನು ಅನೇಕ ಸಲ ಸುತ್ತಿದರು; ಬಹುಶಃ ಮೂರುಸಲ ಸಂಚಾರ ಮಾಡಿದರು. ಅವರು ಹೋದೆಡೆಯಲ್ಲೆಲ್ಲ ಜನರು ಉದ್ಧಾರಗೊಂಡಂತೆ ಭಾವಿಸಿದರು. ಅವರು ವಿರೋಧವನ್ನು ಎದುರಿಸಿ ಗೆಲ್ಲಬೇಕಾಯಿತು. ಆದರೆ ಈ ಕಾರ್ಯವನ್ನು ಅವರು ಪ್ರಿಯವಾದ ತಾರ್ಕಿಕವಾದದಿಂದಲೂ ತಮ್ಮ ಸಂಪೂರ್ಣಾನುಭವದ ಬಲದಿಂದಲೂ ಸಾಧಿಸಿದರು. ಸಾಮಾನ್ಯಜನರನ್ನು ಪಾಷಂಡಮತಗಳು ದಾರಿತಪ್ಪಿಸುತ್ತಿದ್ದ ಕಾಲದಲ್ಲಿ, ಸಂಪ್ರದಾಯ ವಿರೋಧಿಗಳ ನಾಸ್ತಿಕತೆಯನ್ನು ಎದುರಿಸಲು ಸಂಪ್ರದಾಯವಾದಿಗಳು ವ್ಯರ್ಥವಾದ ಕರ್ಮಮಾರ್ಗವನ್ನಲ್ಲದೆ ಬೇರೇನನ್ನೂ ಹೇಳಲಾರದಿದ್ದಾಗ, ಶಂಕರರು ಉಪನಿಷತ್ತಿನ ವೇದಾಂತದ ಔನ್ನತ್ಯವನ್ನು ಮುಟ್ಟಿ ಅಲ್ಲಿಂದ ಮಾನವತೆಯ ಉದ್ಧಾರಕ್ಕಾಗಿ ಶಾಶ್ವತ ಆತ್ಮತತ್ವದ ಗಂಗಾನದಿಯನ್ನು ಹರಿಸಿದರು.

ಶಂಕರರು ಅವತರಿಸಿದುದು ನಾಶಮಾಡುವುದಕ್ಕಲ್ಲ, ಪೂರ್ಣಗೊಳಿಸುವುದಕ್ಕೆ; ಅವರು ಬೋಧಿಸಿದ ಅದ್ವೈತ ತತ್ವವನ್ನು ಅನೇಕ ಸಿದ್ಧಾಂತಗಳಿಗೆ ಎದುರಾಳಿಯೆಂದು ಪರಿಗಣಿಸಬಾರದು. ಶಂಕರರ ಗುರುವಿನ ಗುರುವಾದ ಗೌಡಪಾದರು ಅದ್ವೈತಕ್ಕೂ ದ್ವೈತಪರವಾದ ಸಿದ್ಧಾಂತಗಳಿಗೂ ನಿಜವಾಗಿ ವಿರೋಧವಿಲ್ಲವೆಂದೂ ಬೋಧಿಸಿದ್ದರು. ಒಬ್ಬನು ತನ್ನ ಸ್ವಂತ ಕೈಕಾಲುಗಳೊಡನೆ ಹೇಗೆ ವಿರೋಧಹೊಂದಲಾರನೋ ಹಾಗೆಯೇ ಅದ್ವೈತಕ್ಕೆ ಇತರ ಸಿದ್ಧಾಂತಗಳೊಡನೆ ವಾದವೇ ಇಲ್ಲ. ಏಕವಾದ ಸಂಪೂರ್ಣವಾದ ಆತ್ಮವನ್ನು ಶಂಕರರು ಮತ್ತೆ ಅರ್ಥಮಾಡಿಕೊಂಡು ಕ್ಷೋಭೆಯಿಂದಲೂ ವಿರೋಧಗಳಿಂದಲೂ ತುಂಬಿದ್ದ ಕಾಲದಲ್ಲಿ ಅದನ್ನು ಉಪದೇಶಿಸಿದರು; ವ್ಯತ್ಯಾಸಗಳನ್ನು ಕಡಿಮೆಮಾಡಿ ಪೂರ್ಣವಸ್ತುವಿನ ಅಂಶಗಳು ಎಲ್ಲೆಲ್ಲಿವೆಯೆಂಬುದನ್ನು ವಿಶದಪಡಿಸಿದರು. ಬ್ರಹ್ಮಾದ್ವೈತವನ್ನು ಸ್ಥಾಪಿಸುವುದಲ್ಲದೆ ಪರಿಣಾಮದಲ್ಲಿ ದರ್ಶನಾದ್ವೈತವನ್ನು ಸಾಧಿಸುವುದೂ ಅವರ ಅವತಾರದ ಉದ್ದೇಶವಾಗಿತ್ತು. ಈ ಕಾರ್ಯದಲ್ಲಿ ಅವರು 'ಏಕಂ ಸತ್' ಎಂದು ವೇದವು ಘೋಷಿಸುವ ಪರಮಸತ್ಯವನ್ನೇ ಅನುಸರಿಸಿದರು; ಜೊತೆಗೆ ಸಮಾಧಾನಕಾರಕ ಬುದ್ಧಿಯಿಂದ ಅದರ ಜೊತೆಯಲ್ಲಿಯೇ 'ವಿಪ್ರಾ ಬಹುಧಾ ವದಂತಿ' (ತಿಳಿದವರು ಅದನ್ನು ಅನೇಕ ರೀತಿಯಲ್ಲಿ ವಿವರಿಸುತ್ತಾರೆ) ಎಂದೂ ಸೇರಿಸಿದರು.

ಶಂಕರರ ಈ ಸಹಾಯಕವಾದ ವಿವೇಚನೆಯಿಂದ ಸಂಪ್ರದಾಯವಾದಿಗಳಿಗೂ ಸಂಪ್ರದಾಯವಿರೋಧಿಗಳಿಗೂ ಇಬ್ಬರಿಗೂ ಒಳ್ಳೆಯದಾಯಿತು. ಬೇರೆಬೇರೆ ವಿರೋಧಸ್ಥಾನಗಳಿಂದ ವಾದವನ್ನು ಮೊದಲುಮಾಡಿದ್ದರೂ ನಾಸ್ತಿಕಮತ ಪ್ರಚಾರಮಾಡುವುದರಲ್ಲಿ ಮೀಮಾಂಸಕರೂ ಬೌದ್ಧರೂ ವಿಚಿತ್ರ ಸ್ನೇಹಿತರಾಗಿದ್ದರು. ಈ ಇಬ್ಬರ ಪಾರ್ಶ್ವದೃಷ್ಟಿಯನ್ನೂ ಶಂಕರರು ತಿದ್ದಬೇಕಾಯಿತು. ಶಂಕರರ ಟೀಕೆಗಳಿಂದ ಇಬ್ಬರಿಗೂ ನಷ್ಟವಾಗಲಿಲ್ಲ. ಜ್ಞಾನಮಾರ್ಗದಲ್ಲಿ ಕರ್ಮವು ಮೊದಲ ಮೆಟ್ಟಿಲುಗಳಲ್ಲಿ ಒಂದೆಂದು ಉಚಿತಸ್ಥಾನದಲ್ಲಿ ಅದಕ್ಕೆ ಅವಕಾಶ ಮಾಡಿಕೊಡಲಾಯಿತು. ಬುದ್ಧನಿಂದ ವಿಶೇಷ ಪ್ರಧಾನ್ಯವನ್ನು ಪಡೆದಿದ್ದ ಅಹಿಂಸೆಯು ವೇದಗಳಿಗೆ ಗೊತ್ತಿಲ್ಲದ್ದೇನೂ ಅಲ್ಲ. ಆದುದರಿಂದ ಅದಕ್ಕೆ ಹಿಂದೂಮತದ ಪ್ರಕಾರ ವ್ಯವಹಾರದಲ್ಲಿ ಪ್ರಾಧಾನ್ಯವನ್ನು ನೀಡಲಾಯಿತು. ಬುದ್ಧನನ್ನೂ ವಿಷ್ಣುವಿನ ಒಂದು ಅವತಾರವೆಂದು ನಂಬುವಂತಾಯಿತು.

ದರ್ಶನಕ್ಕೆ ಹೇಗೋ ಹಾಗೆ ಮತಕ್ಕೂ ಶಂಕರರ ಉಪದೇಶದಿಂದ ಲಾಭವಾಯಿತು. ಮತಗಳಿಗೂ ಮತೀಯ ಸಂಸ್ಥೆಗಳಿಗೂ ಅನವಶ್ಯವಾಗಿ ಒಳಹೊಕ್ಕಿದ್ದ ವ್ಯರ್ಥಲಾಪಗಳನ್ನು ಶಂಕರರು ನಿರ್ಮೂಲಮಾಡಲು ಪ್ರಯತ್ನಪಟ್ಟಾಗ ಅನೇಕವೇಳೆ ಅವರ ಪ್ರಾಣಕ್ಕೇ ಅಪಾಯ ಒದಗಿತ್ತು. ಆದರೂ ಈ ನಂಬಿಕೆಗಳನ್ನೂ ಸಂಸ್ಥೆಗಳನ್ನೂ ಅವುಗಳ ಶುದ್ಧಸ್ಥಿತಿಯಲ್ಲಿ ಉಳಿಸಿ ಅವೆಲ್ಲವೂ ಪರಮಾತ್ಮನೆಡೆಗಿರುವ ಬೇರೆಬೇರೆ ಮಾರ್ಗಗಳೆಂಬುದನ್ನು ತೋರಿಸಲು ಅಪೇಕ್ಷಿಸಿದರು. ಶಂಕರರ ಪ್ರಕಾರ ಸಾಕಾರ ಸ್ವರೂಪದ ಪರಮಾತ್ಮನ ಭಾವನೆ ಅತಿ ಶ್ರೇಷ್ಠವಾದುದೇನೂ ಅಲ್ಲ. ಆದರೆ ಪರಮಾತ್ಮನೆಂಬುದು ಅಸಂಬದ್ಧವೂ ಅಲ್ಲ, ಜನಸಾಮಾನ್ಯರಿಗೆ ತೋರಿಸಬೇಕಾದ ಸಮಾಧಾನವೂ ಅಲ್ಲ. ಅದ್ವೈತ ಸಾಧನೆಗೆ ಈಶ್ವರ ಭಕ್ತಿಯು ಅಗತ್ಯವಾದ ಮೆಟ್ಟಿಲು. ಈ ದೃಷ್ಟಿಯಿಂದ ನೋಡಿದರೆ ದೇವರನ್ನು ಯಾವ ಹೆಸರಿನಿಂದ ಕರೆಯುತ್ತೇವೆನ್ನುವುದು ಮುಖ್ಯವಲ್ಲ; ಅರ್ಪಿಸುವ ಪೂಜೆಯಲ್ಲಿ ಶ್ರದ್ಧೆ ಗಾಢತೆಗಳಿರುವುದು ಮುಖ್ಯ. 'ಹರಿಮೀಡೇ ಸ್ತೋತ್ರ'ದಲ್ಲಿ ಶಂಕರರು ಹೀಗೆ ಹೇಳಿದ್ದಾರೆ: 'ಸಂಸಾರವೆಂಬ ಕತ್ತಲೆಯನ್ನು ನಾಶಮಾಡುವ ಹರಿಯನ್ನು ಸ್ತೋತ್ರಮಾಡು. ಬುದ್ಧಿಯ ವೈವಿಧ್ಯದಿಂದ ಆ ಒಂದು ಸತ್ಯವನ್ನು ಅನೇಕ ವಿಧಗಳಲ್ಲಿ ಬ್ರಹ್ಮ, ವಿಷ್ಣು, ರುದ್ರ, ಅಗ್ನಿ, ಸೂರ್ಯ, ಚಂದ್ರ, ಇಂದ್ರ, ವಾಯು, ಯಜ್ಞ ಎಂದು ಮುಂತಾಗಿ ಕರೆಯುತ್ತಾರೆ.' ಮಾತುಗಳು ಬೇರೆಯಾದರೂ ಸಾರ ಒಂದೇ. ಶಂಕರರು ಆಧ್ಯಾತ್ಮಿಕ ಸರ್ವಮೋಕ್ಷವಾದವನ್ನು ನಂಬಿದ್ದರು; ಅದನ್ನೇ ಬೋಧಿಸಿದರು. ಯಾವ ವಿಧವಾದ ವ್ಯತ್ಯಾಸವೂ ಇಲ್ಲದೆ ಅವರು ಪರಮಾತ್ಮನ ವಿವಿಧ ಸ್ವರೂಪಗಳನ್ನು ಕುರಿತು ಸ್ತೋತ್ರಗಳಲ್ಲಿ ಎಲ್ಲಕ್ಕೂ ತಮ್ಮ ನಮನವನ್ನು ಮಾಡಿದ್ದಾರೆ. ಹಿಂದೂ ಮತದ ಎಲ್ಲ ಪಂಥಗಳನ್ನೂ ಶಂಕರರು ಶುದ್ಧಗೊಳಿಸಿ ಸಮನ್ವಯ ಮಾಡಿದರು.

ಅನೇಕ ಶಿಷ್ಯರೊಡಗೂಡಿ, ಊರಿಂದೂರಿಗೆ ಸುತ್ತಿ ಏಕತೆ ಮತ್ತು ಶಾಂತಿಯನ್ನು ಉಪದೇಶಿಸುತ್ತಿದ್ದ ಯುವಕ ಪರಿವ್ರಾಜಕನನ್ನು ನೋಡುವುದು ಜನರಿಗೆ ಸ್ವರ್ಗೀಯ

ದೃಶ್ಯವಾಗಿದ್ದಿರಬೇಕು. ಶಂಕರರು ಭಾರತದ ಒಂದು ಕೊನೆಯಿಂದ ಮತ್ತೊಂದು ಕೊನೆಯವರೆಗೆ ಮಾಡಿದ ಸಂಚಾರದ ವಿವರಗಳನ್ನು ಬೇರೆಬೇರೆ ಶಂಕರವಿಜಯಗಳು ಬೇರೆಬೇರೆಯಾಗಿ ನಿರೂಪಿಸುತ್ತವೆ. ಆದರೆ ಶಂಕರರು ಎಲ್ಲ ಪ್ರಮುಖ ತೀರ್ಥಕ್ಷೇತ್ರಗಳನ್ನೂ ಅನೇಕ ಪಂಥಗಳ ಆಶ್ರಯಸ್ಥಾನಗಳನ್ನೂ ವಿದ್ಯಾಕೇಂದ್ರಗಳನ್ನೂ ಕಂಡು ಬಂದರೆಂದು ಎಲ್ಲ ಮೂಲಗಳೂ ಒಪ್ಪುತ್ತವೆ. ಆಗ ದೇಶದಲ್ಲಿ ಸುಮಾರು ಎಪ್ಪತ್ತೆರಡು ಮತೀಯ ಪಂಥಗಳಿದ್ದು ನೀಚ ಆಚಾರಗಳ ಮೂಲಕ ಜನರ ಕೀಳಾಸೆಗಳಿಗೂ ಕ್ರೋಧಗಳಿಗೂ ಪ್ರೋತ್ಸಾಹವನ್ನು ಕೊಟ್ಟು ಅವರಲ್ಲಿ ಒಡಕುಗಳನ್ನುಂಟುಮಾಡುತ್ತಿದ್ದುವು.

ಶಂಕರರು ದಿಗ್ವಿಜಯ ಸಮಯದಲ್ಲಿ ಸಂಚಾರಮಾಡಿದ ಪ್ರದೇಶಗಳು, ಬೇರೆಬೇರೆ ಪಂಥ ಪಂಗಡಗಳು, ಅವರ ಆಚಾರಗಳು, ದರ್ಶನಗಳು, ಅವುಗಳ ಪ್ರತಿಪಾದಕರೊಡನೆ ಶಂಕರರು ನಡೆಸಿದ ವಾದವಿವಾದಗಳು, ಪ್ರತಿವಾದಿಗಳನ್ನು ವೇದಾಂತಮಾರ್ಗಕ್ಕೆ ಮತಾಂತರಗೊಳಿಸಿದುದು ಮುಂತಾದುವುಗಳ ಬಗ್ಗೆ ಆನಂದಗಿರಿಯು[1] ತನ್ನ ಶಂಕರವಿಜಯದಲ್ಲಿ ಸಂಪೂರ್ಣ ವಿವರಗಳನ್ನೊಳಗೊಂಡ ನಿರೂಪಣೆಯನ್ನು ನೀಡಿದ್ದಾನೆ. ನಾವು ಈಗ ಕೆಲವು ಇಂಥ ವಾದ ವಿವಾದಗಳನ್ನು ಕುರಿತು ಪರಿಶೀಲಿಸೋಣ. ರಾಮೇಶ್ವರವೇ ಮುಂತಾದ ಸ್ಥಳಗಳಲ್ಲಿ ಶೈವಪಂಥಗಳ ಪ್ರತಿನಿಧಿಗಳು ಚರ್ಚೆಗೋಸ್ಕರ ಶಂಕರರನ್ನು ಕಂಡರು. ಶೈವರಲ್ಲಿ ಶೈವ, ರೌದ್ರ, ಉಗ್ರ, ಭಾಟ್ಟ, ಜಂಗಮ, ಪಾಶುಪತ ಮುಂತಾದ ಅನೇಕ ಪಂಥಗಳಿದ್ದುವು. ಅವರೆಲ್ಲರೂ 'ರುದ್ರ' ಅಂದರೆ ಶಿವನೇ ಪರದೇವತೆಯೆಂದೂ, ಅವನನ್ನು ಪೂಜಿಸಿ ಶೈವಲಾಂಛನಗಳನ್ನು ಧರಿಸುವುದರಿಂದ ಮೋಕ್ಷ ಲಭಿಸುವುದೆಂದೂ ನಂಬಿದ್ದರು. ಉಜ್ಜಯಿನಿಯಲ್ಲಿ ಕಾಪಾಲಿಕರೊಡನೆ ವಾದ ನಡೆಯಿತು. ಅವರು ಜಟೆಗಳನ್ನೂ, ಸ್ಫಟಿಕಮಣಿಹಾರವನ್ನೂ, ಬಾಲಚಂದ್ರನನ್ನೂ ಧರಿಸಿ ಶಂಕರರ ಬಳಿಗೆ ಬಂದು, ಭೈರವನೇ ಜೀವಿಗಳಿಗೆಲ್ಲ ಒಡೆಯನೆಂದೂ, ವಿಶ್ವದ ವಿನಾಶಕಾರಕನಾದುದರಿಂದ ಅವನೇ ವಿಶ್ವದ ಸೃಷ್ಟಿಕರ್ತನೂ ರಕ್ಷಕನೂ ಎಂದು ತಮ್ಮ ವಾದವನ್ನು ಮುಂದಿಟ್ಟರು. ಅನಂತಶಯನ ಮುಂತಾದ ಸ್ಥಳಗಳಲ್ಲಿ ಅನೇಕ ವೈಷ್ಣವ ಪಂಥಗಳವರು ಶಂಕರರನ್ನು ವಾದಕ್ಕೆ ಆಹ್ವಾನಿಸಿದರು. ವೈಷ್ಣವ ಪಂಥಗಳವರಲ್ಲದೆ ಅಲ್ಲಿ ಪಾಂಚರಾತ್ರ, ವೈಖಾನಸ, ಕರ್ಮಹೀನ ವೈಷ್ಣವ ಮುಂತಾದವರೂ ಇದ್ದರು. ಅವರ ವಿಷ್ಣುವು ಯಾವ ಒಂದು ರೂಪದಲ್ಲಿದ್ದರೂ ಪರದೇವತೆಯೆಂದೂ ವೈಷ್ಣವಾಗಮಗಳಿಗೆ ವಿಶೇಷ ಅರ್ಥವೂ ಅಧಿಕಾರವೂ ಇವೆಯೆಂದೂ ವಾದಿಸಿದರು. ಸುಬ್ರಹ್ಮಣ್ಯಸ್ಥಲದಲ್ಲಿ ಹಿರಣ್ಯಗರ್ಭಪಂಥಕ್ಕೆ ಸೇರಿದವರು ಸೂಕ್ಷ್ಮ ಪ್ರಪಂಚದ ಆತ್ಮವೇ ಹಿರಣ್ಯಗರ್ಭನೆಂದೂ ಅವನೇ ಮೂಲದೈವವೆಂದೂ

---

1.ಅಧ್ಯಾಯ 4-51. ವ್ಯಾಸರು ಮುದುಕನ ವೇಷದಲ್ಲಿ ಬಂದು ಶಂಕರರ ಬ್ರಹ್ಮಸೂತ್ರ ಭಾಷ್ಯವನ್ನು ವಾದಕ್ಕೊಳಗುಮಾಡುವುದಕ್ಕಿಂತ ಮುಂಚೆ ಈ ದಿಗ್ವಿಜಯ ಸಂಚಾರಗಳು ನಡೆಯಿತೆಂದು ಆನಂದಗಿರಿ ಹೇಳುತ್ತಾನೆ.

ವಾದಿಸಿದರು. ಹರಿದುಹಂಚಿದ ಬೇರೆಬೇರೆ ಪ್ರದೇಶಗಳಲ್ಲಿ ದೇವೀಪಂಥವರೂ ಅನೇಕರಿದ್ದರು. ತುಲಜಾಭವಾನಿಪುರವೆಂಬಲ್ಲಿ ಪ್ರಕೃತಿಯ ಸ್ವರೂಪದಲ್ಲಿ ಶಕ್ತಿಯ ಉಪಾಸಕರಾಗಿದ್ದವರು ಸಕಲ ಸೃಷ್ಟಿಗೂ ಕಾರಣಕರ್ತಳಾದ ಶಕ್ತಿಯೊಬ್ಬಳೇ ಸರ್ವತಂತ್ರ ಸ್ವತಂತ್ರಳಾದ ಪರದೇವತೆಯೆಂದೂ ಅವಳಿಂದಲೇ ಸೃಷ್ಟಿಕರ್ತನಾದ ಬ್ರಹ್ಮ ಮುಂತಾದವರು ಜನ್ಮತಳೆದರೆಂದೂ, ಭವಾನಿಯ ಸ್ವರೂಪದಲ್ಲಿ ಆಕೆಯನ್ನು ಪೂಜಿಸುವುದೇ ಮೋಕ್ಷಕ್ಕೆ ಮಾರ್ಗವೆಂದೂ ವಾದಮಾಡಿದರು. ಹೀಗೆಯೇ ಕುವಲಯಪುರವೆಂಬ ನಗರದಲ್ಲಿ ಮಹಾಲಕ್ಷ್ಮೀ ಪಂಥದವರು ಸಂಪತ್ತಿನ ದೇವತೆಯಾದ ಲಕ್ಷ್ಮಿಯೇ ಎಲ್ಲ ಜೀವಕ್ಕೂ ಮಾತೃವೆಂದು ಸಾರಿದರು. ವಿದ್ವತ್ತಿನ ದೇವತೆಯಾದ ಶಾರದೆಯನ್ನು ಪೂಜಿಸುತ್ತಿದ್ದವರು ಕೆಲವರಿದ್ದರು. ಅವರಿಗೆ ಶಾರದೆಯ ಪೂಜೆಯೇ ಮೋಕ್ಷಕ್ಕೆ ಸಾಧನವಾಗಿತ್ತು.

ಪುರಂಗವಂ ಎಂಬ ಸ್ಥಳದಲ್ಲಿ ಗಣಪತಿ ಪಂಥದ ಅನುಯಾಯಿಗಳು ಶಂಕರರನ್ನು ವಾದಕ್ಕೆ ಕರೆದರು. ಈ ಪಂಥದಲ್ಲಿ ಆರು ವಿಭಾಗಗಳಿದ್ದುವು-ಗಣೇಶನ ಆರು ರೂಪಗಳಲ್ಲಿ ಒಂದೊಂದನ್ನು ಒಬ್ಬೊಬ್ಬರು ಪೂಜಿಸುತ್ತಿದ್ದರು. ಮಹಾಗಣಪತಿ, ಹರಿದ್ರಾಗಣಪತಿ, ಉಚ್ಛಿಷ್ಠಗಣಪತಿ, ನವನೀತ ಗಣಪತಿ, ಸ್ವರ್ಣಗಣಪತಿ ಮತ್ತು ಸಂತಾನಗಣಪತಿ ಎಂಬುವೇ ಆ ಆರು ಸ್ವರೂಪಗಳು. ಈ ಎಲ್ಲ ಪಂಥಗಳ ಪ್ರಕಾರ ಎಲ್ಲ ವಿಘ್ನಗಳ ನಾಶಕಾರಕನೂ ಅತ್ಯುತ್ತಮ ಸುಖವನ್ನುಂಟುಮಾಡುವವನೂ ಆದ ಗಣಪತಿಯೇ ಪರದೇವತೆ. ಸೂರ್ಯೋಪಾಸನೆಯನ್ನು ಅನುಸರಿಸುತ್ತಿದ್ದ ಮತ್ತೊಂದು ಪಂಥವೂ ಇತ್ತು.

ಶಂಕರರ ಪ್ರಕಾರ ಈ ಎಲ್ಲ ಪಂಥಗಳಿಗೂ ಪಂಗಡಗಳಿಗೂ ಅದ್ವೈತವೇ ಉತ್ತರವಾಗಿತ್ತು. ಎಲ್ಲ ಪಂಥಗಳ ದೇವತೆಗಳೂ ಈಶ್ವರನ ಒಂದು ಮುಖ. ಈಶ್ವರನಲ್ಲಿ ಅವರೆಲ್ಲರೂ ಐಕ್ಯರಾಗುತ್ತಾರೆ. ಬ್ರಹ್ಮ, ವಿಷ್ಣು ಮತ್ತು ಶಿವ ಎಂಬ ತ್ರಿಮೂರ್ತಿಗಳಲ್ಲಿ ಕಾಣಿಸಿಕೊಳ್ಳುವ ಈಶ್ವರನೇ ವಿಶ್ವದ ಏಕಮೇವ ಕಾರಣ. ಇವುಗಳಲ್ಲಿ ಯಾವೊಂದು ಅಂಗವನ್ನು ಪೂಜಿಸಿದರೂ, ದೈವತ್ವದ ಇನ್ನೂ ಕೆಳದರ್ಜೆಯ ಅಭಿವ್ಯಕ್ತಿಯನ್ನು ಪೂಜಿಸಿದರೂ ಅದು ಕೊನೆಗೆ ಪೂಜೆಮಾಡುವವನನ್ನು ಗುರಿಯ ಹತ್ತಿರಕ್ಕೆ ಕರೆದೊಯ್ಯುತ್ತದೆ. ನಿಷ್ಕಾಮಕರ್ಮ, ಪರಮಾತ್ಮನ ಯಾವೊಂದು ಸ್ವರೂಪದಲ್ಲಿಯಾದರೂ ಭಕ್ತಿ, ಮನಸ್ಸನ್ನು ನಿಗ್ರಹಿಸುವ ಯೋಗ ಇವುಗಳಿಂದ ಸಾಧಕನು ಜ್ಞಾನಮಾರ್ಗವನ್ನನುಸರಿಸಲು ಶಕ್ತನಾಗುತ್ತಾನೆ. ಶ್ರವಣ, ಮನನ, ನಿಧಿಧ್ಯಾಸನಗಳ ಮೂಲಕ ಜ್ಞಾನಮಾರ್ಗವು ಬ್ರಹ್ಮಸಾಕ್ಷಾತ್ಕಾರವನ್ನುಂಟುಮಾಡಿ ಮೋಕ್ಷವನ್ನು ಗಳಿಸಿಕೊಡುತ್ತದೆ. ವಿವಿಧ ಪಂಥೀಯರು ತಮ್ಮ ಸಂಕುಚಿತ ದೃಷ್ಟಿಯನ್ನೂ ಹಟವನ್ನೂ ಬಿಟ್ಟು, ಪಂಥೀಯವಾದ ಲಾಂಛನಗಳನ್ನು ಹಾಕುವುದನ್ನು ತ್ಯಜಿಸಿ, ಜೀವನಮಾರ್ಗದಲ್ಲಿಯೂ ಪೂಜಾವಿಧಾನದಲ್ಲಿಯೂ ಉನ್ನತ ಕ್ರಮಗಳನ್ನು ಅನುಸರಿಸಬೇಕೆಂದು ಬುದ್ಧಿವಾದವನ್ನು ಹೇಳಿದರು.

ಮೂರು ಶೈವಕ್ಷೇತ್ರಗಳಲ್ಲಿ ಸ್ಥಳವೃಕ್ಷವು ಅರ್ಜುನವೃಕ್ಷವಾಗಿದೆ. ತಿರುಪ್ಪುದೈಮರುದೂರ್ ಎಂಬುದನ್ನು ಪುಟಾರ್ಜುನ ಎಂದು ಕರೆಯುತ್ತಾರೆ. ಇದು ತಿರುನೆಲ್ವೇಲಿ ಜಿಲ್ಲೆಯಲ್ಲಿದೆ. ತಿರುವಿದೈಮರುದೂರ್ ಎಂಬುದನ್ನು ಮಧ್ಯಾರ್ಜುನ ಎನ್ನುತ್ತಾರೆ. ಇದು ತಂಜಾವೂರು ಜಿಲ್ಲೆಯಲ್ಲಿದೆ. ಮಲ್ಲಿಕಾರ್ಜುನವೆನ್ನುವುದು ಆಂಧ್ರಪ್ರದೇಶದ ಶ್ರೀಶೈಲದಲ್ಲಿದೆ. ಇವುಗಳಲ್ಲಿ ಎರಡನೆಯದಾದ ತಿರುವಿದೈಮರುದೂರ್ ಎಂಬಲ್ಲಿಗೆ ಶಂಕರರು ಬಂದಾಗ ಒಂದು ಪವಾಡ ನಡೆಯಿತು. ಅಲ್ಲಿರುವ ಪ್ರಸಿದ್ಧವಾದ ದೇವಾಲಯದ ಮಹಾಲಿಂಗವೇ ಅದ್ವೈತಸತ್ಯವನ್ನು ಘೋಷಿಸಬೇಕೆಂಬುದು ಆಚಾರ್ಯರ ಅಪೇಕ್ಷೆಯಾಗಿತ್ತು. ಶಂಕರರ ಪ್ರಾರ್ಥನೆಯನ್ನು ಅಂಗೀಕರಿಸಿ ಮಹಾಲಿಂಗದಿಂದ ಪರಮೇಶ್ವರನು ಹೊರಬಂದು ಬಲಗೈಯನ್ನು ಮೇಲೆತ್ತಿ "ಸತ್ಯಂ ಅದ್ವೈತಂ ಸತ್ಯಂ ಅದ್ವೈತಂ ಸತ್ಯಂ ಅದ್ವೈತಂ" ಎಂದು ಮೂರು ಸಲ ಘೋಷಿಸಿದನು. ಪರಮೇಶ್ವರನ ಈ ಸಾಕ್ಷಾತ್ಕಾರವನ್ನು ಕಂಡವರಿಗೆಲ್ಲ ತುಂಬ ಸಂತೋಷವಾಗಿ ಅವರೆಲ್ಲರೂ ಶಂಕರರನ್ನು ತಮ್ಮ ಆಚಾರ್ಯರನ್ನಾಗಿ ಒಪ್ಪಿಕೊಂಡರು.

ಶ್ರೀಶೈಲದಲ್ಲಿ ಮಲ್ಲಿಕಾರ್ಜುನ ದೇವಾಲಯದಲ್ಲಿ ಬೇರೆಯ ರೀತಿಯ ಪವಾಡ ನಡೆಯಿತು. ಆ ಸಮಯದಲ್ಲಿ ಶ್ರೀಶೈಲವು ಕಾಪಾಲಿಕರ ಆಶ್ರಯ ಸ್ಥಾನವಾಗಿತ್ತು. ಈ ಪಂಥದವರು ಶಂಕರರನ್ನು ವಾದದಲ್ಲಿ ಸೋಲಿಸುವುದು ಅಸಾಧ್ಯವೆಂಬುದನ್ನು ತಿಳಿದು ಅವರ ಪ್ರಾಣಾಪಹರಣ ಮಾಡಲು ಒಂದು ಪಿತೂರಿಯನ್ನು ನಡೆಸಿದರು. ಅವರೊಬ್ಬರೇ ಇದ್ದಾಗ ಅವರ ಬಳಿಗೆ ಒಬ್ಬ ಪ್ರತಿನಿಧಿಯನ್ನು ಕಳುಹಿಸಿದರು. ಆ ಕಾಪಾಲಿಕನು ಶಂಕರರಿಗೆ ಹೀಗೆ ಹೇಳಿದನು: "ತಮ್ಮ ಜೀವನದಲ್ಲಿ ಇತರರಿಗೆ ಉಪಕಾರ ಮಾಡುವುದೇ ಮುಖ್ಯ ಉದ್ದೇಶವಾಗಿದೆ. ಶಿವನನ್ನು ಒಲಿಸಿಕೊಳ್ಳುವುದಕ್ಕಾಗಿ ಬಹುದಿನಗಳಿಂದ ಆತನನ್ನು ಪ್ರಾರ್ಥಿಸುತ್ತಿದ್ದೇನೆ. ಇದಕ್ಕಾಗಿ ಆತನಿಗೆ ಒಬ್ಬ ಚಕ್ರವರ್ತಿಯ ಅಥವಾ ಒಬ್ಬ ಸರ್ವಜ್ಞನಾದ ಋಷಿಯ ತಲೆಯನ್ನು ಅರ್ಪಿಸಬೇಕಾಗಿದೆ. ನನಗೆ ಚಕ್ರವರ್ತಿಯು ಸಿಗುವುದಿಲ್ಲ. ತಾವು ಸಂಪೂರ್ಣರಾದ ಋಷಿಗಳಾಗಿದ್ದೀರಿ. ತಮ್ಮ ಶಿರಸ್ಸನ್ನು ನಾನು ಪಡೆಯಬಹುದೇ?" ಶಂಕರರು ನಗುತ್ತಾ ಹೇಳಿದರು: "ನಿನ್ನ ಅಪೇಕ್ಷೆಯನ್ನು ಪೂರೈಸಲು ನಾನು ಸಿದ್ಧನಿದ್ದೇನೆ. ಆದರೆ ನನ್ನ ಬಳಿ ಯಾರೂ ಇಲ್ಲದಿದ್ದಾಗ, ಅಲ್ಲದೆ ನಾನು ಸಮಾಧಿಯಲ್ಲಿದ್ದಾಗ ನೀನು ನನ್ನ ಬಳಿಗೆ ಬರಬೇಕು." ಕಾಪಾಲಿಕನು ಹಾಗೆಯೇ ಮಾಡಿದನು. ಆದರೆ ಭಯಂಕರವಾದ ಆ ಕೃತ್ಯವನ್ನು ಮಾಡುವುದಕ್ಕೆ ಮುಂಚೆ ನೃಸಿಂಹಾಕಾರದಲ್ಲಿ ಬಂದಿದ್ದ ಒಬ್ಬಾತನಿಂದ ಕೊಲ್ಲಲ್ಪಟ್ಟನು. ಹೀಗೆ ಬಂದಿದ್ದವರು ಇನ್ನಾರೂ ಅಲ್ಲದೆ ಶಂಕರರ ಪ್ರಥಮ ಶಿಷ್ಯರಾದ ಪದ್ಮಪಾದರಾಗಿದ್ದರು. ಸ್ನಾನಕ್ಕಾಗಿ ಹೋಗಿದ್ದ ಪದ್ಮಪಾದರಿಗೆ ಹೇಗೋ ಕಾಪಾಲಿಕನ ಪಿತೂರಿಯ ಶಂಕೆ ತಲೆದೋರಿತು. ತಮ್ಮ ಇಷ್ಟದೈವವಾದ ನೃಸಿಂಹನನ್ನು ಕುರಿತು ಅವರು ಪ್ರಾರ್ಥನೆ ಮಾಡಿದರು. ನೃಸಿಂಹನೇ ಅವರ ಮೇಲೆ ಆವೇಶವಾದಂತಾಗಿ, ಸಮಯಕ್ಕೆ ಸರಿಯಾಗಿ ಅಲ್ಲಿಗೆ ಬಂದು ಅನಾಹುತವನ್ನು

ತಪ್ಪಿಸಿದ್ದರು. ಶಂಕರರು ಎಚ್ಚೆತ್ತು ಕಾಪಾಲಿಕನು ಸತ್ತುಬಿದ್ದಿದ್ದುದನ್ನೂ ನೃಸಿಂಹನು ಪಕ್ಕದಲ್ಲಿ ನಿಂತಿದ್ದುದನ್ನೂ ನೋಡಿದರು. ಸ್ವಲ್ಪ ಕಾಲವಾದಮೇಲೆ ನೃಸಿಂಹನ ಸ್ಥಾನದಲ್ಲಿ ಪದ್ಮಪಾದರೇ ಏನಾಯಿತು ಎಂಬುದನ್ನು ಅರಿಯದೆ ಭಕ್ತಿಯಿಂದ ನಿಂತಿರುವುದು ಕಂಡುಬಂದಿತು.

ಪದ್ಮಪಾದರು ತಮ್ಮ ಬಾಲ್ಯದಲ್ಲಿ ನೃಸಿಂಹನ ಪರಮಭಕ್ತರಾಗಿದ್ದರು. ನೃಸಿಂಹನ ಪೂಜೆಮಾಡುವಂತೆ ಯಾರೋ ಒಬ್ಬರು ಅವರಿಗೆ ಉಪದೇಶಿಸಿ ನೃಸಿಂಹಮಂತ್ರವನ್ನು ಹೇಳಿಕೊಟ್ಟಿದ್ದರು. ಆಗ ವಿಷ್ಣುಶರ್ಮನೆಂದು ಹೆಸರು ಪಡೆದಿದ್ದ ಪದ್ಮಪಾದರು ಒಂದು ಬೆಟ್ಟದ ತಪ್ಪಲಿನಲ್ಲಿದ್ದ ಕಾಡಿಗೆ ಹೋಗಿ ಈ ಮಂತ್ರವನ್ನು ಜಪಿಸುತ್ತಾ ಗಾಢವಾದ ತಪಸ್ಸನ್ನಾಚರಿಸಿದರು. ಅವರನ್ನೇ ಗಮನಿಸುತ್ತಿದ್ದ ಬೇಡನೊಬ್ಬನು ಅವರೇನು ಮಾಡುತ್ತಿದ್ದಾರೆಂಬುದನ್ನು ಕೇಳಿದನು. "ಇಂಥ ಕಾಡುಗಳಲ್ಲಿ ನೃಸಿಂಹನು ವಾಸಿಸುತ್ತಾನೆ. ಅವನನ್ನು ಕಾಣಲು ಬಂದಿದ್ದೇನೆ" ಎಂದು ಹೇಳಿ ಪದ್ಮಪಾದರು ಅವನನ್ನು ಕಳುಹಿಸಲು ಯೋಚಿಸಿದರು. ಆದರೆ ಬೇಡನ ಕುತೂಹಲ ಮತ್ತೂ ಹೆಚ್ಚಿತು. ಅವನಿಗೆ ನೃಸಿಂಹನೆಂಬುದು ಏನು ಎಂಬುದನ್ನು ತಿಳಿಯಬೇಕೆನ್ನಿಸಿತು. "ಅದು ಎಂಥ ಸಿಂಹವೋ?" ಪದ್ಮಪಾದರು ಹೇಳಿದರು: "ನೃಸಿಂಹನ ದೇಹದಲ್ಲಿ ಕೆಳಗಿನ ಅರ್ಧಭಾಗವು ಮನುಷ್ಯಾಕಾರದಲ್ಲಿರುತ್ತದೆ. ಮೇಲಿನ ಅರ್ಧಭಾಗವು ಸಿಂಹದಂತಿರುತ್ತದೆ." ಮಾರನೆಯ ದಿನ ಮುಗಿಯುವುದರೊಳಗಾಗಿ ನೃಸಿಂಹನನ್ನು ತರುವುದಾಗಿ ಮಾತುಕೊಟ್ಟು ಬೇಡನು ನೃಸಿಂಹನ ರೂಪವನ್ನೇ ಕುರಿತು ಯೋಚಿಸುತ್ತಾ ಬೇಡನು ಕಾಡಿನ ಮೂಲೆಮೂಲೆಗಳನ್ನೆಲ್ಲ ಹುಡುಕಿದನು. ಆದರೆ ನೃಸಿಂಹನು ಮಾತ್ರ ಸಿಕ್ಕಲಿಲ್ಲ. ಮಾರನೆಯ ದಿನ ಕೊನೆಗೊಳ್ಳುವುದರಲ್ಲಿತ್ತು. ಆದುದರಿಂದ ಬೇಡನು ಆತ್ಮಹತ್ಯೆಮಾಡಿಕೊಳ್ಳಲು ನಿಶ್ಚಯಿಸಿದನು. ಆ ಸಮಯದಲ್ಲಿ ನೃಸಿಂಹನು ಪ್ರತ್ಯಕ್ಷನಾದನು. ಬೇಡನು ನೃಸಿಂಹನನ್ನು ತಡಮಾಡಿ ಬಂದುದಕ್ಕೆ ಬೈದು ಕಾಡಿನ ಬಳ್ಳಿಯೊಂದರಿಂದ ಅವನನ್ನು ಕಟ್ಟಿ ಪದ್ಮಪಾದರಿದ್ದ ಸ್ಥಳಕ್ಕೆ ಎಳೆದುಕೊಂಡು ಬಂದನು. ಬೇಡನು "ಇಲ್ಲಿ ನೋಡಿ! ನೃಸಿಂಹನನ್ನು ಕರೆತಂದಿದ್ದೇನೆ!" ಎಂದು ಅತ್ಯಾನಂದದಿಂದ ಕಿರಿಚಿದನು. ಆದರೆ ಪದ್ಮಪಾದರಿಗೆ ಏನೂ ಕಾಣಲಿಲ್ಲ. ನೃಸಿಂಹನ ಧ್ವನಿಮಾತ್ರ ಹೀಗೆ ಹೇಳುತ್ತಿರುವಂತೆ ಕೇಳಿಸಿತು: "ನಾನು ಈ ಬೇಡನಿಗೆ ಅವನ ತೀವ್ರವಾದ ಧ್ಯಾನಕ್ಕಾಗಿ ನನ್ನ ಸ್ವರೂಪವನ್ನು ತೋರಿಸಿದ್ದೇನೆ. ಈಗ ನೀನು ನನ್ನ ಧ್ವನಿಯನ್ನು ಮಾತ್ರ ಕೇಳಬಲ್ಲೆ. ಇಲ್ಲಿಂದ ಮುಂದೆ ನಿನಗೆ ಅಗತ್ಯವಾದಾಗಲೆಲ್ಲ ನಾನು ನಿನ್ನ ಬಳಿ ಬರುತ್ತೇನೆ." ಈ ಘಟನೆಯಾದಮೇಲೆಯೇ ಚೋಳದೇಶದ ಯುವಕನಾದ ವಿಷ್ಣುಶರ್ಮನು ಕಾಶಿಗೆ ಹೋಗಿ ಅಲ್ಲಿ ಶಂಕರರ ಶಿಷ್ಯನಾದುದು. ಹೀಗೆ ಶ್ರೀಶೈಲದಲ್ಲಿ ನೃಸಿಂಹನ ಅನುಗ್ರಹವು ಆಚಾರ್ಯರ ಪ್ರಾಣರಕ್ಷಣೆಯ ಕಾರ್ಯದಲ್ಲಿ ಸಹಾಯಕವಾಯಿತು.

ಇನ್ನು ಈ ಅಧ್ಯಾಯವನ್ನು ಕಾಶ್ಮೀರದಲ್ಲಿ ಶಂಕರರು ಮಾಡಿದ ಸಂಚಾರದ ನಿರೂಪಣೆಯಿಂದ ಮುಗಿಸಬಹುದು. ಕ್ರಿಸ್ತಶಕ 631ರಲ್ಲಿ ಕಾಶ್ಮೀರಕ್ಕೆ ಬಂದು ಸೂತ್ರಗಳನ್ನೂ ಶಾಸ್ತ್ರಗಳನ್ನೂ ಅಭ್ಯಾಸಮಾಡಿದ ಚೀಣಾ ಯಾತ್ರಿಕ ಹ್ಯೂನ್‌ತ್ಸಾಂಗನು ಅಲ್ಲಿನ ವಿದ್ವತ್ಸಂಪ್ರದಾಯವನ್ನು ಕುರಿತು ಬಹುವಾಗಿ ಹೊಗಳಿ ಹೀಗೆ ಬರೆದಿದ್ದಾನೆ: "ಈ ದೇಶವು ಪ್ರಾಚೀನ ಕಾಲದಿಂದಲೂ ವಿದ್ವತ್ತಿಗೆ ಹೆಸರುವಾಸಿಯಾಗಿದೆ. ಈ ದೇಶದ ಪುರೋಹಿತರು ಉದಾತ್ತವಾದ ಮತನಿಷ್ಠೆಯುಳ್ಳವರು ಎದ್ದುಕಾಣುವ ನೀತಿಗುಣವುಳ್ಳವರೂ ಅಲ್ಲದೆ ತಮ್ಮ ಸಿದ್ಧಾಂತಗಳನ್ನು ಸ್ಪಷ್ಟವಾಗಿ ಪ್ರತಿಪಾದಿಸುವ ಶಕ್ತಿಯುಳ್ಳವರೂ ಅಧಿಕ ಬುದ್ಧಿಶಾಲಿಗಳೂ ಆಗಿದ್ದಾರೆ." ಕಾಶ್ಮೀರದ ವಿದ್ವಾಂಸರನ್ನು ಅವರ ಸಂಸ್ಕೃತಿಗೂ ಉದಾತ್ತವಾದ ಸಂಸ್ಕೃತದ ವಿದ್ವತ್ತಿಗೂ ಜನರು ತುಂಬ ಗೌರವಿಸುತ್ತಿದ್ದರು. ಆ ಪ್ರದೇಶವನ್ನೇ ಕಾಶಿಯಷ್ಟು ಪವಿತ್ರವಾದುದೆಂದು ಜನರು ಭಾವಿಸುತ್ತಿದ್ದರು. ಇನ್ನೂ ಕೆಲವು ಕಾಲದ ಬಳಿಕ ಬಂದ ಅಕ್ಬರನ ಸ್ನೇಹಿತನೂ, ತತ್ತ್ವಬೋಧಕನೂ, ಮಾರ್ಗದರ್ಶಕನೂ ಆದ ಅಬುಲ್ ಫಜಲ್ ಎಂಬುವವನು ಕಾಶ್ಮೀರದ ಕಣಿವೆಗಳ ಪ್ರಕೃತಿಸೌಂದರ್ಯವನ್ನು ಪವಿತ್ರ ಆವರಣವನ್ನೂ ಕುರಿತು ಹೇಳುತ್ತಾ ಆ ಪ್ರದೇಶವನ್ನು ಹೀಗೆ ಹೊಗಳಿದ್ದಾನೆ: "ಪ್ರಾಪಂಚಿಕ ಸುಖಗಳನ್ನು ಅನುಭವಿಸುವವನಿಗೆ ಆನಂದದಾಯಕವಾಗಿಯೂ ಸಂನ್ಯಾಸಿಗೆ ಆಶ್ರಮವಾಗಿಯೂ ಇರಲು ತುಂಬ ಅರ್ಹವಾಗಿದೆ." ಕಾಶ್ಮೀರದಲ್ಲಿ ಹಿಂದೂ ಧರ್ಮದ ಎರಡು ಪಂಥಗಳಾದ ಶೈವಶಾಕ್ತಮತಗಳಲ್ಲದೆ ಬೌದ್ಧಮತವೂ ಕೂಡ ಪ್ರಚಾರದಲ್ಲಿತ್ತು. ಹ್ಯೂನ್‌ತ್ಸಾಂಗನ ಪ್ರಕಾರ ಆತನ ಕಾಲದಲ್ಲಿ ನೂರು ಬೌದ್ಧವಿಹಾರಗಳೂ ಐದು ಸಾವಿರ ಭಿಕ್ಷುಗಳೂ ಕಾಶ್ಮೀರದ ಕಣಿವೆಯಲ್ಲಿದ್ದರು. ಮುಖ್ಯವಾದ ಹಿಂದೂ ಪಂಥಗಳಿಗೆ ಸೇರಿದ ದೇವಾಲಯಗಳಂತೂ ಅಸಂಖ್ಯಾತವಾಗಿದ್ದುವು. ಸಾಂಪ್ರದಾಯಿಕವಾದ ಸೇರಿದ ಸಂಪ್ರದಾಯವಿರೋಧವಾದ ದರ್ಶನವಾಗಲೀ ಮತವಾಗಲೀ ಬೆಳೆಯುವುದಕ್ಕೆ ಕಾಶ್ಮೀರವು ತುಂಬ ಫಲವತ್ತಾದ ಕ್ಷೇತ್ರವಾಗಿತ್ತು.

ಕಾಶ್ಮೀರದ ಶೈವಮತವು ಪ್ರತ್ಯಭಿಜ್ಞ ಅಥವಾ ತ್ರಿಕ ಎಂಬ ಹೆಸರಿನ ಅದ್ವೈತ. ಆ ಮತದ ಪ್ರಕಾರ ಪರಮಸತ್ಯವಾದ ಶಿವನೇ ಎಲ್ಲ ಜೀವಿಗಳ ಆತ್ಮ; ಅವನನ್ನು ಬಿಟ್ಟು ಬೇರೆ ಸತ್ಯವಿಲ್ಲ. ಶಿವನನ್ನು 'ಅನುತ್ತರ' ಎಂದು ಕರೆಯುತ್ತಾರೆ. 'ಅನುತ್ತರ' ಎಂದರೆ ತದತೀತವಾದ ಸತ್ಯವಿಲ್ಲ ಎಂದರ್ಥ. ಅವನೇ ನಿಷ್ಕಳಂಕಜ್ಞಾನ, ಪರಮಾನಭೂತಿ, ಪರಮದೈವ. ಅವನಿಂದಲೇ ವಿಶ್ವವು ಪ್ರತಿಬಿಂಬದಂತೆ, ತೋರಿಕೆಯಂತೆ, ಉತ್ಪತ್ತಿಯಾಗುತ್ತದೆ. ಕಾಶ್ಮೀರ ಶೈವಮತದ ಪ್ರಕಾರ ಈ ತೋರ್ಕೆಯು ಸತ್ಯವಾದುದು; ಆದರೆ ಅದ್ವೈತದಂತೆ ವಿಶ್ವದ ಇರುವಿಕೆಯು ಕೇವಲ ಮಿಥ್ಯೆ. ಶಂಕರರು ಪರಮಗುರುವಾದ ಗೌಡಪಾದರು ಅದ್ವೈತವೇದಾಂತದ ಸತ್ಯವನ್ನು ಪ್ರತಿಪಾದಿಸುವುದಕ್ಕೆ ತಮ್ಮ 'ಮಾಂಡೂಕ್ಯಕಾರಿಕೆ'ಯಲ್ಲಿ ಬೌದ್ಧಮತದ ಪರಿಭಾಷೆಯನ್ನು ಉಪಯೋಗಿಸಿಕೊಂಡಂತೆ ಶಂಕರರು ಅದೇ ಕಾರ್ಯಕ್ಕಾಗಿ ತಮ್ಮ

'ದಕ್ಷಿಣಾಮೂರ್ತಿಸ್ತೋತ್ರ'ದಲ್ಲಿ ಕಾಶ್ಮೀರದ ಶೈವಮತದ ಪಾರಿಭಾಷಿಕ ಪದಗಳನ್ನು ಉಪಯೋಗಿಸಿದ್ದಾರೆಂಬುದು ಕುತೂಹಲಕಾರವಾದ ವಿಷಯ. ದಕ್ಷಿಣಾಮೂರ್ತಿಸ್ತೋತ್ರದಲ್ಲಿ ವಿಶ್ವವನ್ನು ಮಾಯೆಯ ಮೂಲಕ ಕನ್ನಡಿಯಲ್ಲಿ ಕಾಣುವ ನಗರಕ್ಕೆ ಹೋಲಿಸಲಾಗಿದೆ; ಮಹಾಯೋಗಿಯಿಂದ ಅಥವಾ ಮಾಯಾವಿಯಿಂದ ಕಲ್ಪಿತವಾದವುಗಳಂತೆ ಅದು ಒಂದು ಭ್ರಮೆ. ಪಂಚಭೂತಗಳೂ ಅವುಗಳ ಅಧಿದೇವತೆಗಳೂ ದೇಹ ಮನಸ್ಸುಗಳ ಎಲ್ಲ ಅಂಶಗಳೂ ಮಾಯೆಯ ವಿಲಾಸ. ಮಾಯಾಕಲ್ಪಿತವಾದ ವ್ಯಾಮೋಹದಿಂದ ಸಂಸಾರವಾಹಿನಿಯಲ್ಲಿ ಆತ್ಮ ಸಿಕ್ಕಿಹಾಕಿಕೊಂಡಿದೆ. ಆದರೆ ಯಾವಾಗ ಅದು ಎಚ್ಚೆತ್ತು ಅದ್ವೈತವಾದ ಆತ್ಮದ ಸತ್ಯಪ್ರಕೃತಿಯನ್ನು ಅರಿತುಕೊಳ್ಳುತ್ತದೆಯೋ ಅಲ್ಲಿಂದ ಮುಂದೆ ಅದಕ್ಕೆ ತೊಳಲಾಟವಿಲ್ಲ. ದಕ್ಷಿಣಾಮೂರ್ತಿಸ್ವರೂಪದಲ್ಲಿರುವ ಪ್ರಪಂಚಗುರುವಾದ ಶಿವನು ಒಂದು ಮಾತನ್ನೂ ಆಡದೆ ಚಿನ್ಮುದ್ರೆಯಿಂದ ಬೋಧಿಸುತ್ತಿರುವುದು ಅದ್ವೈತಸತ್ಯವನ್ನೇ. ಹೀಗೆ ಶಂಕರರು ಈ ಸಣ್ಣ ಸ್ತೋತ್ರದಲ್ಲಿ ಕಾಶ್ಮೀರದ ಶೈವಮತದ ಪರಿಭಾಷೆಯಲ್ಲಿ ಅದ್ವೈತ ವೇದಾಂತದ ಸಾರವನ್ನು ವಿವರಿಸಿದ್ದಾರೆ.

ಕಾಶ್ಮೀರದ ಶೈವ ಮತದಂತೆಯೇ ಶಕ್ತಿಪಂಥವೂ ಕೂಡ ಅದ್ವೈತದ ಒಂದು ರೂಪ. ಆದರೆ ಅದು ಸಾಧನೆಗೋಸ್ಕರವಾಗಿ ಪರಮಸತ್ಯದ ಶಕ್ತಿ ಸ್ವರೂಪವನ್ನು ಪ್ರಮುಖವಾಗಿ ಭಾವಿಸುತ್ತದೆ ಅಷ್ಟೆ! ಈ ಪಂಥದವರಿಗೆ ಕಾಶ್ಮೀರವು ಬಹು ಮುಖ್ಯವಾದ ಅನುಭಾವಕ್ಷೇತ್ರ. ಆರ್ಯಾವರ್ತ ಅಥವಾ ಭಾರತವು 'ಶ್ರೀಚಕ್ರ'ದ 'ಬಿಂದು-ತ್ರಿಕೋಣ'ವನ್ನು ಪ್ರತಿನಿಧಿಸುತ್ತದೆಂದು ಹೇಳುತ್ತಾರೆ. ಈ ತ್ರಿಕೋಣದ ಮೂರು ತುದಿಗಳು ಕಾಶ್ಮೀರ, ನೇಪಾಳ ಮತ್ತು ಕನ್ಯಾಕುಮಾರಿ. ಕಾಶಿಯೇ ಅದರ ಬಿಂದು. ಈ ಯೋಜನೆಯ ಪ್ರಕಾರ ಕಾಶ್ಮೀರವು ಪರಮ ದೈವವಾದ ಕಾಮೇಶ್ವರನ ಪತ್ನಿ ಕಾಮೇಶ್ವರಿಯು ವಾಸಿಸುವ ಕ್ಷೇತ್ರ. ಕಲ್ಹಣನು ತನ್ನ *ರಾಜತರಂಗಿಣಿಯಲ್ಲಿ* (ರಚನೆ ಕ್ರಿ.ಶ. 1448-49) ಕಾಶ್ಮೀರದ ಶಾರದಾದೇವಿಯ ದೇವಸ್ಥಾನವನ್ನು ಹೆಸರಿಸಿ, ರಾಜನಾದ ಲಲಿತಾದಿತ್ಯನ ಕಾಲದಲ್ಲಿ ಈ ದೇವಾಲಯವನ್ನು ನೋಡಲು ಬಂಗಾಳದ ಗೌಡಜನರು ಆಗಿಂದಾಗ ಬರುತ್ತಿದ್ದರೆಂದು ಹೇಳುತ್ತಾರೆ. (ಒಂದು ವರದಿಯ ಪ್ರಕಾರ, ಶಂಕರರು ಗೌಡದೇಶದ ಸಂಚಾರವಾದಮೇಲೆ ಕಾಶ್ಮೀರಕ್ಕೆ ಹೋದರಂತೆ.) *ರಾಜತರಂಗಿಣಿಯನ್ನು* ಇಂಗ್ಲಿಷಿಗೆ ಅನುವಾದ ಮಾಡಿರುವ ಎಂ.ಎ.ಸ್ಟೀನ್ ಎಂಬಾತನು ಈ ಶಾರದಾ ದೇವಾಲಯವು ಕೃಷ್ಣಗಂಗೆಯ ಮೇಲ್ಕಣಿವೆಯ 'ಶರ್ದಿ' ಎಂಬಲ್ಲಿದ್ದಿರಬೇಕೆಂದು ಹೇಳುತ್ತಾನೆ. ಈ ತೀರ್ಥಕ್ಷೇತ್ರದ ಜನಪ್ರಿಯತೆಯನ್ನು ಕುರಿತು ಆಲ್ಬೆರೂನಿ ಹೀಗೆ ಹೇಳಿದ್ದಾನೆ: "ಕಾಶ್ಮೀರದ ಒಳಪ್ರದೇಶದಲ್ಲಿ ರಾಜಧಾನಿಯಿಂದ ಎರಡು ಮೂರು ದಿನದ ಪ್ರಯಾಣದಷ್ಟು ದೂರದಲ್ಲಿ, ಬೋಲಾರ್ ಪರ್ವತದ ದಿಕ್ಕಿನಲ್ಲಿ ಶಾರದಾ ಎಂಬ ಮರದ ವಿಗ್ರಹವಿದೆ. ಯಾತ್ರಿಕರು ಇದನ್ನು ತುಂಬ ಗೌರವಿಸುತ್ತಾರೆ ಮತ್ತು ಹೆಚ್ಚು

ಜನರು ಇದನ್ನು ದರ್ಶನಮಾಡಲು ಬರುತ್ತಾರೆ." ಆ ಬಳಿಕ ಪೂಜಾರ್ಥಿಗಳ ಸೌಕರ್ಯಕ್ಕಾಗಿ ಶ್ರೀನಗರದ ಹತ್ತಿರದಲ್ಲಿ ಈ ಪ್ರಾಚೀನ ವಿಗ್ರಹದ ಪ್ರತಿಯಾಗಿ ಮತ್ತೊಂದು ವಿಗ್ರಹವನ್ನು ಪ್ರತಿಷ್ಠೆಮಾಡಲಾಯಿತೆಂದೂ ಸ್ಟೀನ್ ಹೇಳಿದ್ದಾನೆ.

ಮಾಧವೀಯ ಶಂಕರವಿಜಯದ ಕೊನೆಯ ಅಧ್ಯಾಯದಲ್ಲಿ ಶಂಕರರು ಕಾಶ್ಮೀರದ ಶಾರದಾದೇವಾಲಯಕ್ಕೆ ಹೋಗಿದ್ದ ಒಂದು ಕಥೆಯನ್ನು ಹೇಳಿದೆ. ಗಂಗಾತೀರದಲ್ಲಿ ಶಂಕರರು ತಮ್ಮ ಶಿಷ್ಯರೊಡನೆ ತಂಗಿದ್ದಾಗ, ಒಂದು ಬೆಳಗ್ಗೆ ವಿದ್ಯಾಭಿಮಾನಿ ದೇವತೆಯಾದ ಶಾರದಾದೇವಿಯ ದೇವಾಲಯವುಳ್ಳ ಕಾಶ್ಮೀರದ ವೈಭವವನ್ನು ಕೇಳಿದರು. ಮಂಟಪದ ಆಕಾರದಲ್ಲಿ ನಿರ್ಮಿತವಾಗಿದ್ದ ಆ ದೇವಾಲಯದಲ್ಲಿ ನಾಲ್ಕು ಪ್ರವೇಶದ್ವಾರಗಳಿದ್ದುವು. ಅಲ್ಲಿ ಶಾರದಾದೇವಿಯ ಸಾನ್ನಿಧ್ಯದಲ್ಲಿ 'ಸರ್ವಜ್ಞ ಪೀಠ'ವೊಂದಿದ್ದಿತು. ಸರ್ವಜ್ಞರಲ್ಲದವರು ಯಾರೂ ಆ ಪೀಠದಲ್ಲಿ ಕುಳಿತುಕೊಳ್ಳುವ ಹಾಗಿರಲಿಲ್ಲ. ಈ ಹಿಂದೆ ಉತ್ತರ, ಪೂರ್ವ, ಪಶ್ಚಿಮಗಳಿಂದ ವಿದ್ವಾಂಸರು ದೇವಾಲಯ ಪ್ರವೇಶಕ್ಕೆ ಪ್ರಯತ್ನಪಟ್ಟಿದ್ದರು. ಆದರೆ ದಕ್ಷಿಣ ದಿಕ್ಕಿನಿಂದ ಯಾರೂ ಪ್ರಯತ್ನಪಟ್ಟಿರಲಿಲ್ಲ. ದಕ್ಷಿಣಕ್ಕೆ ಸೇರಿದ ಶಂಕರರು ಇದನ್ನು ಕೇಳಿದಾಗ ಆ ದೇವಾಲಯಕ್ಕೆ ಹೋಗಿ ಅದ್ವೈತ ವಿವೇಕದ ಉದಾತ್ತತೆಯನ್ನೂ ಸರ್ವಜ್ಞತೆಯನ್ನೂ ಸ್ಥಾಪಿಸಲು ಅಪೇಕ್ಷೆಪಟ್ಟರು. ಅವರು ಕಾಶ್ಮೀರಕ್ಕೆ ಹೋಗಿ ದೇವಾಲಯದ ದಕ್ಷಿಣ ದ್ವಾರದ ಬಳಿ ಬಂದಾಗ ಬೇರೆ ಬೇರೆ ಪಂಥಗಳ ವಿದ್ವಾಂಸರು ಅವರನ್ನು ಎದುರಿಸಿ ಅವರ ಸರ್ವಜ್ಞತ್ವವನ್ನೂ ಅಥವಾ ಅದ್ವೈತದ ಪರಮ ವಿವೇಕವನ್ನೂ ಕುರಿತು ವಾದಮಾಡಿದರು. ವೈಶೇಷಿಕ ಪರಮಾಣುವಾದಿಗಳು, ನೈಯಾಯಿಕ ತಾರ್ಕಿಕರು, ಸಾಂಖ್ಯ ದ್ವೈತಿಗಳು, ಬೌದ್ಧರು, ಜೈನರು–ಎಲ್ಲರು ಒಬ್ಬರಾದ ಮೇಲೊಬ್ಬರು ಶಂಕರರೊಡನೆ ವಾದಮಾಡಿದರು. ಶಂಕರರು ಆ ಎಲ್ಲ ದರ್ಶನಗಳ ನಿಕಟವಾದ ಜ್ಞಾನವನ್ನು ಪ್ರದರ್ಶಿಸಿದರಲ್ಲದೆ ಅವರೆಲ್ಲರಿಗೂ ಅದ್ವೈತದ ಮೇಲ್ಮೆಯನ್ನು ಮನವೊಪ್ಪುವಂತೆ ತಿಳಿಸಿದರು. ಕೊನೆಯದಾಗಿ ವಾದಕ್ಕೆ ನಿಂತವರು ವೇದಗಳ ಸಾರಾಂಶವು ಕರ್ಮದಲ್ಲಿ ಅಡಗಿದೆಯೆಂದು ಹೇಳಿದ ಪೂರ್ವ ಮೀಮಾಂಸಕರು. ಅವರಿಗೆ ಪೂರ್ವಪಕ್ಷವಾಗಿ ಶಂಕರರು ಶ್ರುತಿವಾಕ್ಯಗಳಿಗೆ ವೇದಾಂತಪರವಾದ ಅರ್ಥವನ್ನು ಸಮನ್ವಯ ಹೇಗೆ ಮಾಡಬಹುದೆಂಬುದನ್ನು ಸ್ಪಷ್ಟಪಡಿಸಿ ಅದ್ವೈತದ ಪಾರಮ್ಯವನ್ನು ಸ್ಥಾಪಿಸಿದರು. ಶಾರದಾಪೀಠದ ಬಾಗಿಲು ತೆರೆಯಿತು. ಶಾರದಾ ದೇವಿಯೇ ಕೊನೆಯ ಒಂದು ಪರೀಕ್ಷೆಯನ್ನೊಡ್ಡಿ ವಿದ್ವತ್ಪ್ರಪಂಚಕ್ಕೆಲ್ಲ, ವಿದ್ವತ್ತಿನಿಂದಲೂ ಗುಣಶೀಲಗಳಿಂದಲೂ ಶಂಕರರು ಸರ್ವಜ್ಞಪೀಠವನ್ನು ಏರುವ ಗೌರವಕ್ಕೆ ಹೇಗೆ ಪಾತ್ರರಾಗಿದ್ದಾರೆಂಬುದನ್ನು ವ್ಯಕ್ತಪಡಿಸಿದಳು. ಈ ಗೌರವವನ್ನು ಶಂಕರರು ವೈಯಕ್ತಿಕ ಗೌರವವೆಂದು ಭಾವಿಸಲಿಲ್ಲ. ಮಾಧವೀಯ ಶಂಕರ ವಿಜಯದ ಮುಂಚಿನ ಅಧ್ಯಾಯವೊಂದರಲ್ಲಿ ಕೃತಿಕಾರನು ಹೇಳಿರುವಂತೆ ಶಂಕರರು ಬೇರೆ ಬೇರೆ ಪಂಥೀಯರನ್ನು ಸೋಲಿಸಿದುದು ವೈಯಕ್ತಿಕವಾದ ಲಾಭಕ್ಕಾಗಲೀ

ಗೌರವಕ್ಕಾಗಲೀ ಅಲ್ಲ; ಏಕೆಂದರೆ ಅವರಿಗೆ ಕಿಂಚಿತ್ತೂ ಅಹಂಭಾವವಿರಲಿಲ್ಲ. ಅದೆಲ್ಲವೂ ವೇದಾಂತದ ನಿರ್ಮಲ ಸತ್ಯವನ್ನು ತಿರುಚಿ ದೋಷಾರೋಪಣೆ ಮಾಡುವವರ ಪ್ರಭಾವದಿಂದ ಅದನ್ನು ಬಿಡುಗಡೆ ಮಾಡುವುದಕ್ಕಾಗಿ ಮಾಡಿದ ವಾದವಾಗಿತ್ತು.

ಕಾಶ್ಮೀರದಲ್ಲಿ ಶಂಕರರು ಮಾಡಿದ ಸಂಚಾರಕ್ಕೆ ಸಂಬಂಧಿಸಿದಂತೆ ಅನೇಕವಾಗಿಯೇ ಐತಿಹ್ಯಗಳಿವೆ. ಒಂದು ವರದಿಯಂತೆ ಶಾಕ್ತನಾದ ಅಭಿನವಗುಪ್ತನೊಡನೆ ಶಂಕರರು ವಾದಮಾಡಿದುದು ಕಾಶ್ಮೀರದಲ್ಲಿ. ಸೋತುಹೋದ ಶಾಕ್ತಮತ ಪ್ರಮುಖನಾದ ಅವನು ವಾಮಾಚಾರದಿಂದ ಶಂಕರರ ಶರೀರಕ್ಕೆ ಅತ್ಯುಗ್ರವಾದ ರೋಗ ಅಂಟುವಂತೆ ಮಾಡಿದನು. ಶಿಷ್ಯರ ಗುರುಭಕ್ತಿ ಮತ್ತು ಸಮಾಧಾನಕರವಾದ ಶುಶ್ರೂಷೆಗಳಿಂದ ರೋಗವು ಉಪಶಮನವಾಯಿತು. ಇನ್ನೊಂದು ವರದಿಯ ಪ್ರಕಾರ, ಶಾಕ್ತಪಂಥಕ್ಕೆ ಸಂಬಂಧಿಸಿದಂತೆ ಒಬ್ಬ ಬ್ರಾಹ್ಮಣೀಯ ಸೊಸೆಯೊಡನೆ ಶಂಕರರು ವಾದಮಾಡಿದಮೇಲೆ, ಶಾಕ್ತದರ್ಶನದಲ್ಲಿ ಆಕೆಗಿದ್ದ ವಿದ್ವತ್ತನ್ನು ಮೆಚ್ಚಿ ಆಕೆಗೆ ತರಂಗವೆಂಬ ಹೆಸರಿನ ವಿಶೇಷವಾದ ತಲೆಯಲ್ಲಿ ಧರಿಸುವ ವಸ್ತ್ರವನ್ನು ಅನುಗ್ರಹಿಸಿದನು. ಈಗಲೂ ಕಾಶ್ಮೀರದಲ್ಲಿ ಬ್ರಾಹ್ಮಣೀಯರು ಈ ಬಗೆಯ ವಸ್ತ್ರವನ್ನು ಧರಿಸುತ್ತಾರೆ. ಆಚಾರ್ಯರು "ಸೌಂದರ್ಯಲಹರೀ" ಸ್ತೋತ್ರವನ್ನು ಕಾಶ್ಮೀರದಲ್ಲಿ ರಚಿಸಿದರೆಂದು ಹೇಳುತ್ತಾರೆ. ಶಂಕರರು ರಚಿಸಿದರೆಂಬ ಸ್ತೋತ್ರಗಳಲ್ಲಿ ಈ ಸ್ತೋತ್ರವು ಬಹುಪ್ರಮುಖವಾದ ಸ್ಥಾನವನ್ನು ಆಕ್ರಮಿಸಿದೆ. ಇದರ ಲಯಬದ್ಧವಾದ ನೂರು ಶ್ಲೋಕಗಳಲ್ಲಿ'ಶ್ರೀಚಕ್ರ'ದ ಅನುಭಾವತತ್ವದ ಆಧಾರಭೂತವಾದ ವಿವರಣೆಯೂ, ದೇವೀಸ್ವರೂಪದ ಆತ್ಮಾನಂದಕರವಾದ ಸೌಂದರ್ಯಸಾಕಾರವಾದ ವರ್ಣನೆಯೂ ಇವೆ. ಶಾಕ್ತಪಂಥದ ವೈದಿಕ ಸಂಪ್ರದಾಯವಾದ 'ಸಮಯಾಚಾರ'ವನ್ನು ವಿವರಿಸುತ್ತಾ ಅದ್ವೈತಸಾಧನೆಯೇ ಶಕ್ತಿಪೂಜೆಯ ಪರಮೋದ್ದೇಶವೆಂದು ಶಂಕರರು ಭಕ್ತರಿಗೆ ಬೋಧಿಸಿದ್ದಾರೆ.

ಕಾಶ್ಮೀರಕ್ಕೆ ಶಂಕರರು ಬಂದಿದ್ದುದನ್ನೂ ಅವರ ಅಧ್ಯಾತ್ಮಿಕ ವಿಜಯವನ್ನೂ ಒಂದು ಬೆಟ್ಟದ ಮೇಲಿನ ದೇವಸ್ಥಾನವು ಸ್ಮಾರಕಗೊಳಿಸಿದೆ. ಬೆಟ್ಟಕ್ಕೂ ಆ ದೇವಸ್ಥಾನಕ್ಕೂ ಅವರ ಹೆಸರನ್ನೇ ಇಡಲಾಗಿದೆ. ಗಿರಿಯ ಮೇಲೆ ಶಂಕರಾಚಾರ್ಯ ದೇವಾಲಯವಿದೆ. ಆ ಬೆಟ್ಟಕ್ಕೆ ತಖ್ತ–ಇ–ಸುಲೈಮಾನ್ ಎಂದೂ ಹೆಸರಿದೆ. ಶ್ರೀನಗರದಲ್ಲಿ ಸಾವಿರ ಅಡಿ ಎತ್ತರದ ಬೆಟ್ಟದ ಮೇಲೆ ಮನಮೋಹಕವಾದ ಈ ದೇವಸ್ಥಾನವನ್ನು ಕಟ್ಟಲಾಗಿದೆ. ಈ ದೇವಸ್ಥಾನವನ್ನು ಕಟ್ಟಿದ ಕಾಲದ ವಿಚಾರದಲ್ಲಿ ಬೇರೆಬೇರೆ ಊಹೆಗಳಿವೆ. ಸ್ಥಳೀಯ ಐತಿಹ್ಯಗಳನ್ನು ಅನುಸರಿಸಿ ಕನಿಂಗ್‌ಹ್ಯಾಮ್ ಎಂಬ ವಿದ್ವಾಂಸನು ಈ ದೇವಸ್ಥಾನವನ್ನು ಅಶೋಕನ ಮಗನಾದ ಜಲೌಕನು ನಿರ್ಮಿಸಿದನೆನ್ನುತ್ತಾನೆ (ಕ್ರಿ.ಪೂ. 220). ದೇವಸ್ಥಾನದ ವಾಸ್ತುವಿನ ಶೈಲಿಯ ಆಧಾರದ ಮೇಲೆ ಫರ್ಗೂಸನ್ ಎಂಬ ವಿದ್ವಾಂಸನು ಕನಿಂಗ್‌ಹ್ಯಾಮ್‌ನ ಅಭಿಪ್ರಾಯವನ್ನು

ಒಪ್ಪಲು ಅರ್ಹವಾದುದು ಅಲ್ಲ ಎನ್ನುತ್ತಾನೆ. ಎಲ್ಲ ವಿವಿಧ ಅಭಿಪ್ರಾಯಗಳನ್ನೂ ಪರಿಶೀಲಿಸಿ ಶಂಕರಾಚಾರ್ಯರ ದೇವಾಲಯವು ಕ್ರಿ.ಶ. 700ರ ಸುಮಾರಿನಲ್ಲಿ ನಿರ್ಮಾಣವಾಗಿರಬಹುದೆಂದು ರಾಮಚಂದ್ರ ಕಾಕ್ ಅವರು ತೀರ್ಮಾನಿಸಿದ್ದಾರೆ.

ಕಾಶ್ಮೀರದೊಡನೆ ಶಂಕರಾಚಾರ್ಯರು ಬೆಳಸಿದ ಸಂಬಂಧದಿಂದ ಕಣಿವೆಯ ಜನತೆಗೆ ದೊರಕಿದ ಗಾಢವಾದ ಅಧ್ಯಾತ್ಮಿಕ ಭಾವನೆಯನ್ನೂ ಮನೋವೈಶಾಲ್ಯವನ್ನೂ ದೃಷ್ಟಾಂತಪಡಿಸಲು ಕೆಲವು ಉದಾಹರಣೆಗಳನ್ನು ಕೊಡಬಹುದು. 'ರಾಜತರಂಗಿಣಿ'ಯನ್ನು ರಚಿಸಿದ ಕಲ್ಹಣನು ಹುಟ್ಟಿನಿಂದ ಶೈವನಾದರೂ ಎಲ್ಲ ಮತಗಳಿಗೂ ಪಂಥಗಳಿಗೂ ಸಮಾನ ಗೌರವವನ್ನು ತೋರಿಸಿದನು. ಜೈನ್-ಉಲ್-ಅಬಿದಿನ್ ಎಂಬ ರಾಜನು, ತನ್ನ ತಂದೆಯೂ ಅಣ್ಣನೂ ಕಾಶ್ಮೀರದ ಹಿಂದೂಗಳಿಗೆ ಅಪಾರ ಕಷ್ಟನಿಷ್ಠುರಗಳನ್ನುಂಟುಮಾಡಿದಮೇಲೆ, ರಾಜ್ಯಕ್ಕೆ ಒಡೆಯನಾದಾಗ, ತನ್ನ ಪೂರ್ವಿಕರ ದುಷ್ಕಾರ್ಯಗಳಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಪ್ರಯತ್ನಪಟ್ಟನು. ಹಿಂದೂಗಳು ಅನುಭವಿಸುತ್ತಿದ್ದ ಕಷ್ಟಕಾರ್ಪಣ್ಯಗಳನ್ನು ನಿರ್ಮೂಲಗೊಳಿಸಿ, ದೇಶದಿಂದ ಓಡಿಹೋಗಿದ್ದವರನ್ನು ದೇಶಕ್ಕೆ ಕರೆಸಿಕೊಂಡು ಅವರ ಭೂಮಿಕಾಣಿಗಳನ್ನೂ ಆಸ್ತಿಪಾಸ್ತಿಗಳನ್ನೂ ಹಿಂದಿರುಗಿಸಿದನು. ಹೀಗೆ ಅನೇಕ ವಿಧದಲ್ಲಿ ಆತನು ಹಿಂದೂ ಮತಕ್ಕೆ ತನ್ನ ಪಕ್ಷಪಾತವನ್ನು ತೋರಿಸಿದನು. ಅವನು ಸಂಸ್ಕೃತದಲ್ಲಿ ಪ್ರಾವೀಣ್ಯವನ್ನು ಸಂಪಾದಿಸಿ ಹಿಂದೂಗಳ ಪವಿತ್ರ ಗ್ರಂಥಗಳನ್ನು ಗೌರವ ಬುದ್ಧಿಯಿಂದ ವ್ಯಾಸಂಗಮಾಡಿದನು. ಆತನ ಕೊನೆಯ ದಿನಗಳಲ್ಲಿ ತಂದೆ ಮಕ್ಕಳಿಗುಂಟಾದ ಜಗಳದ ದೆಸೆಯಿಂದ ದುಃಖವುಂಟಾದಾಗ 'ಯೋಗ ವಾಸಿಷ್ಠ'ದಲ್ಲಿ ಪ್ರತಿಪಾದಿತವಾಗಿರುವ ಅದ್ವೈತ ತತ್ವವನ್ನು ಅನುಸರಿಸಿ ಮನಸ್ಸಮಾಧಾನವನ್ನು ತಂದುಕೊಂಡನು. ಈ ಹಿಂದೆಯೇ ಹೆಸರಿಸಿರುವ ಅಬುಲ್ ಫಜಲ್ ಆಧ್ಯಾತ್ಮಿಕ ಮೌಲ್ಯಗಳಿಗೆ ಬದ್ಧರಾಗಿದ್ದ ಕಾಶ್ಮೀರಿ ಬ್ರಾಹ್ಮಣರ ಬಗ್ಗೆ ತನಗಿದ್ದ ಅತಿಶಯವಾದ ಗೌರವವನ್ನು ಹೀಗೆ ಸೂಚಿಸಿದ್ದಾನೆ: "ಈ ದೇಶದಲ್ಲಿ ತುಂಬ ಗೌರವಾರ್ಹವಾದ ಪಂಗಡವೆಂದರೆ ಬ್ರಾಹ್ಮಣರದು; ಸಂಪ್ರದಾಯ ಮತ್ತು ಕಂದಾಚಾರಗಳಿಂದ ಅವರು ಸ್ವತಂತ್ರರಾಗಬೇಕಾದದು ಅಗತ್ಯವಾದರೂ ಅವರು ಪರಮಾತ್ಮನ ನಿಜವಾದ ಪೂಜಕರು. ತಮ್ಮ ಪಂಗಡಕ್ಕೆ ಸೇರದವರ ಮೇಲೆ ಅವರು ನಿಂದೆಯ ಮಾತುಗಳನ್ನಾಡುವುದಿಲ್ಲ. ಯಾರನ್ನೂ ಭಿಕ್ಷೆ ಕೇಳುವುದಿಲ್ಲ; ಪೀಡಿಸುವುದಿಲ್ಲ." ಕಳೆದ ಒಂದುಸಾವಿರ ವರ್ಷಗಳಲ್ಲಿ ಕಾಶ್ಮೀರವು, ಭಾರತದ ಇತರ ಪ್ರಾಂತಗಳಂತೆ, ಅಗಾಧವಾದ ಪ್ರತಿಕೂಲಗಳ ಎದುರಿನಲ್ಲಿ ತನ್ನ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳುವುದು ಸಾಧ್ಯವಾಗಿದ್ದರೆ ಅದಕ್ಕೆ ಅದ್ವೈತದ ದೃಢವಾದ ಆಧಾರದ ಮೇಲೆ ಹಿಂದೂಮತವನ್ನು ಕ್ರೋಢಿಕರಿಸಿದ ಶಂಕರರ ಜೀವನ ಮತ್ತು ಕಾರ್ಯಗಳು ಪ್ರಬಲವಾದ ಕಾರಣಗಳೆಂದು ಖಂಡಿತ ಹೇಳಬಹುದು.

# 4. ಉದ್ದೇಶಸಾಧನೆ

ಬದರಿ ಕೇದಾರಗಳಿಂದ ರಾಮೇಶ್ವರ ಕನ್ಯಾಕುಮಾರಿಗಳವರೆಗೆ ಶಂಕರರು ಸಂಚಾರಮಾಡಿ, ಪ್ರಾಚೀನ ಧರ್ಮವನ್ನು ಪುನಃಸ್ಥಾಪನೆ ಮಾಡಿ, ಕಾಲಕ್ರಮದಲ್ಲಿ ಅದರೊಳಕ್ಕೆ ಸೇರಿಕೊಂಡಿದ್ದ ಅನವಶ್ಯವಾದ ಅನುಚಿತಗಳನ್ನು ನಿರ್ಮೂಲಮಾಡಿ ಧರ್ಮದ ಚೈತನ್ಯವನ್ನು ಜೀರ್ಣೋದ್ಧಾರಮಾಡಿದರು.

ಹಿಂದೂಗಳಲ್ಲಿ ಮತೀಯ ಸಾಮರಸ್ಯವನ್ನು ಪ್ರೋತ್ಸಾಹಿಸುವುದು ಶಂಕರರ ಪ್ರಥಮ ಕಾರ್ಯಗಳಲ್ಲಿ ಒಂದಾಗಿತ್ತು. ಈಗಾಗಲೇ ನಾವು ಕಂಡಿರುವಂತೆ ಅವರು ಅದ್ವೈತವೆಂಬ ಐಕ್ಯತತ್ತ್ವದ ಆಧಾರದ ಮೇಲೆ ಎಲ್ಲರನ್ನೂ ಒಗ್ಗೂಡಿಸಲು ಪ್ರಯತ್ನಪಟ್ಟರು. ಹಿಂದೂಮತದಲ್ಲಿ ಅನೇಕ ಪಂಥಗಳಿರಬಹುದು. ಆದರೆ ಅವುಗಳಲ್ಲಿ ಪರಸ್ಪರ ವೈಷಮ್ಯಗಳಿರಬಾರದು. ಅಲ್ಲದೆ ಯಾವೊಂದೂ ಪಂಥವೂ ಸತ್ಯ ಮತ್ತು ಪಾವಿತ್ರ್ಯಗಳಮೇಲೆ ಸಂಪೂರ್ಣ ಹಕ್ಕನ್ನು ಹೊಂದಿರಬಾರದು. ಹಿಂದೂಮತದ ಆರು ಮುಖ್ಯ ಪಂಥಗಳನ್ನು ಶುದ್ಧಿಗೊಳಿಸಿ ಸಮನ್ವಯಗೊಳಿಸಲು ಪ್ರಯತ್ನಮಾಡಿದುದ ರಿಂದಲೇ ಅವರನ್ನು ಷಣ್ಮತಸ್ಥಾಪಕಾಚಾರ್ಯ ಎಂದು ಕರೆಯುತ್ತಾರೆ. (ಶೈವ, ವೈಷ್ಣವ, ಶಾಕ್ತ, ಸೌರ, ಗಾಣಾಪತ್ಯ ಮತ್ತು ಕೌಮಾರ ಎಂಬುವೇ ಆ ಷಣ್ಮತಗಳು). ಬೇರೆಬೇರೆ ಪಂಥಗಳಲ್ಲಿ ಹೊಂದಾಣಿಕೆಯ ದೃಷ್ಟಿಯನ್ನು ಪ್ರೋತ್ಸಾಹಿಸಲು ಅನುಸರಿಸಿದ ಸ್ಪಷ್ಟಮಾರ್ಗದಲ್ಲಿ ಪಂಚಾಯತನದ ಪೂಜೆಯನ್ನು ಜನಪ್ರಿಯಗೊಳಿಸಿದುದೂ ಒಂದು. ಈ ಪದ್ಧತಿಯ ಪ್ರಕಾರ ಆದಿತ್ಯ, ಅಂಬಿಕಾ, ವಿಷ್ಣು, ಗಣಪತಿ ಮತ್ತು ಮಹೇಶ್ವರ ಎಂಬ ಐದು ದೇವತೆಗಳ ಮೂರ್ತಿಗಳನ್ನು ಪೂಜೆಮಾಡುವುದು. ಅವುಗಳಲ್ಲಿ ಭಕ್ತನ ಇಷ್ಟದೇವತೆಗೆ ಪ್ರಧಾನಸ್ಥಾನವನ್ನು ಕೊಡುವುದು. ಮಾರ್ಕಂಡೇಯ ಸಂಹಿತೆಯ ಪ್ರಕಾರ ಅದ್ವೈತದ ಅನುಯಾಯಿಗಳು ಪಂಚಾಯತನದ ಪೂಜೆಯನ್ನು ಮಾಡಬೇಕೆಂದು ಶಂಕರರು ತಮ್ಮ ಶಿಷ್ಯರಿಗೆ ಬೋಧಿಸಿದರು.

ಹಿಂದೂಗಳ ಮತೀಯ ಜೀವನದಲ್ಲಿ ದೇವಸ್ಥಾನಗಳೂ ತೀರ್ಥಯಾತ್ರಾ ಕ್ಷೇತ್ರಗಳೂ ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಶಂಕರರು ಬಹುಶಃ ಎಲ್ಲ ಪ್ರಮುಖ ದೇವಸ್ಥಾನಗಳಿಗೂ ತೀರ್ಥಯಾತ್ರಾ ಸ್ಥಾನಗಳಿಗೂ ಭೇಟಿಕೊಟ್ಟರು. ಎಲ್ಲೆಲ್ಲಿ ಅಗತ್ಯವಾಗಿತ್ತೋ ಅಲ್ಲೆಲ್ಲ ಪವಿತ್ರತೆಯನ್ನುಂಟುಮಾಡಿದರು. ಪೂಜಾಕ್ರಮದಲ್ಲಿ ತಪ್ಪುಗಳನ್ನು ತಿದ್ದಿದರು. ಪ್ರಾಣಿಗಳಿಗೆ ಹಿಂಸೆಮಾಡಿ ಬಲಿಕೊಡುತ್ತಿದ್ದ ಸ್ಥಳಗಳಲ್ಲಿ ಅದನ್ನು ನಿಲ್ಲಿಸಿದರು. ದೇವತೆಗಳ ಉಗ್ರಸ್ವರೂಪವನ್ನು ಸಾಮ್ಯಸ್ವರೂಪವನ್ನಾಗಿ

ಮಾರ್ಪಡಿಸಿದರು. ಇಂಥ ಇತರ ಕಾರ್ಯಕ್ರಮಗಳನ್ನೂ ಕೈಗೊಂಡರು. ಹಿಮಾಲಯದಿಂದ ಕನ್ಯಾಕುಮಾರಿವರೆಗೆ, ಕಾಶ್ಮೀರದಿಂದ ನೇಪಾಲ ಮತ್ತು ಅಸ್ಸಾಮಿನವರೆಗೆ, ದ್ವಾರಕೆಯಿಂದ ಪುರಿಯವರೆಗೆ ದೇಶದ ಬೇರೆಬೇರೆ ಭಾಗಗಳಲ್ಲಿ ದೇವಾಲಯಗಳನ್ನು ಪವಿತ್ರಗೊಳಿಸಲು ಆಚಾರ್ಯರು ಏನೇನು ಮಾಡಿದರೆಂಬುದರ ಕಥೆಗಳನ್ನು ಈಗಲೂ ಸ್ಥಳೀಯ ಐತಿಹ್ಯಗಳು ಉಳಿಸಿಕೊಂಡು ಬಂದಿವೆ.

ಶಂಕರರು ಕೈಲಾಸದಿಂದ ಐದು ಸ್ಫಟಿಕ ಲಿಂಗಗಳನ್ನು ತಂದು ಐದು ಪವಿತ್ರ ಕ್ಷೇತ್ರಗಳಲ್ಲಿ ಪ್ರತಿಷ್ಠೆಮಾಡಿದರೆಂದು ಸಾಂಪ್ರದಾಯಿಕವಾದ ಕಥೆಯಿದೆ. ಚಿದಂಬರ ದೇವಸ್ಥಾನದಲ್ಲಿ ಮೋಕ್ಷಲಿಂಗವನ್ನೂ, ಕೇದಾರದಲ್ಲಿ ಮುಕ್ತಿಲಿಂಗವನ್ನೂ, ನೇಪಾಳದ ನೀಲಕಂಠ ದೇವಾಲಯದಲ್ಲಿ ವರಲಿಂಗವನ್ನೂ, ಕಾಂಚಿಯ ಕಾಮಕೋಟಿಪೀಠದಲ್ಲಿ ಯೋಗಲಿಂಗವನ್ನೂ, ಶೃಂಗೇರಿಯ ಶಾರದಾಪೀಠದಲ್ಲಿ ಭೋಗಲಿಂಗವನ್ನೂ ಪ್ರತಿಷ್ಠೆಮಾಡಿದರೆಂದು ಪ್ರತೀತಿ.

ವೈಷ್ಣವ, ಶೈವ, ಶಾಕ್ತ ಮುಂತಾದ ಎಲ್ಲ ವರ್ಗಗಳ ದೇವಸ್ಥಾನಗಳನ್ನೂ ಶಂಕರರು ಕಂಡುಬಂದರು. ಚೂರ್ಣಾನದಿಯು ತನ್ನ ಪ್ರವಾಹಪಾತ್ರವನ್ನು ಬದಲಿಸಿ ಕಾಲಟಿಯಲ್ಲಿ ತಮ್ಮ ವಂಶೀಕರ ಮನೆಯ ಮುಂದೆ ಹರಿಯುವಂತೆ ಮಾಡಿದರೆಂಬ ಸಾಂಪ್ರದಾಯಿಕ ಕಥೆಯನ್ನು ನಾವು ನೆನಪಿಗೆ ತಂದುಕೊಳ್ಳಬಹುದು. ಈ ನದಿಯ ಮುನ್ನಿನ ಪಾತ್ರದ ದಡದಲ್ಲಿ ಒಂದು ಕೃಷ್ಣ ದೇವಸ್ಥಾನವಿದ್ದಿತು. ನದಿಯ ಪ್ರವಾಹದಲ್ಲಿ ಮಾರ್ಗವ್ಯತ್ಯಾಸವಾದುದರಿಂದ ಅದು ಶಿಥಿಲವಾಗಿ ಬಿದ್ದುಹೋಯಿತು. ಶಂಕರರು ಈ ದೇವಾಲಯವನ್ನು ಪುನಃ ಕಟ್ಟಿಸಿ ದೈವಪ್ರತಿಷ್ಠೆಮಾಡಿಸಿದರು. ಹೀಗೆ, ಕಾಲಟಿಯನ್ನು ಅವರು ಬಿಡುವುದರೊಳಗಾಗಿಯೇ ಒಂದು ದೇವಸ್ಥಾನದ ಪುನರ್‌ಸ್ಥಾಪನೆಗೆ ಅವರು ಕಾರಣಕರ್ತರಾದರು; ಈಗಲೂ ಅಲ್ಲಿ ಕೃಷ್ಣನ ರೂಪದಲ್ಲಿ ವಿಷ್ಣುವನ್ನು ಪೂಜೆ ಮಾಡಲಾಗುತ್ತಿದೆ. ತಮ್ಮ ದಿಗ್ವಿಜಯದ ಸಮಯದಲ್ಲಿ ಶಂಕರರು ವಿಷ್ಣುಪೂಜೆಗೆ ಪ್ರಸಿದ್ಧವಾಗಿದ್ದ ಅನಂತಶಯನ (ತ್ರಿವೇಂದ್ರಂ) ಮುಂತಾದ ಸ್ಥಳಗಳಿಗೂ ಭೇಟಿಕೊಟ್ಟರು. ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ನಮ್ಮ ದೇಶದಲ್ಲಿ ಪ್ರಸಿದ್ಧವಾದ ಅನೇಕ ವಿಷ್ಣುದೇವಾಲಯಗಳು ಚುಕ್ಕಿಗಳಂತೆ ಹರಡಿಕೊಂಡಿವೆ. ಹಿಮಾಲಯದ ಪವಿತ್ರತಮವಾದ ಬದರಿಕಾಶ್ರಮದಲ್ಲಿ ಶಂಕರರು ವ್ಯಾಸಮಹರ್ಷಿಗಳನ್ನು ಕಂಡರೆಂದೂ ಸೂತ್ರಭಾಷ್ಯವನ್ನು ಬರೆಯುವುದಕ್ಕೆ ಮುಂಚೆ ಅವರ ಆಶೀರ್ವಾದವನ್ನು ಪಡೆದರೆಂದೂ, ಅಲ್ಲಿಯೇ ಅವರ ಪರಮಗುರುವಾದ ಗೌಡಪಾದರನ್ನು ಕಂಡರೆಂದೂ ಹೇಳುತ್ತಾರೆ. ಇನ್ನೊಂದು ಕಥೆಯೂ ಇದೆ. ಶಂಕರರು ಬದರಿಕಾಶ್ರಮಕ್ಕೆ ಮತ್ತೊಮ್ಮೆ ಬಂದಾಗ ನಾರಾಯಣನು ಸಾಕ್ಷಾತ್ಕಾರವಾಗಿ, ಅಲಕಾನದಿಯ ಪಾತ್ರದಲ್ಲಿ ಬಿದ್ದಿದ್ದ ತನ್ನ ವಿಗ್ರಹವನ್ನು, ದಡದ ಮೇಲೆ ದೇವಾಲಯವನ್ನು ಕಟ್ಟಿಸಿ ಅಲ್ಲಿ ಪ್ರತಿಷ್ಠೆಮಾಡಬೇಕೆಂದು ನಿರ್ದೇಶಿಸಿದನು. ದೇವರು ನಿರ್ದೇಶಿಸಿದಂತೆ ಶಂಕರರು ಮಾಡಿದರು. ಬದರೀಶನ ದೇವಸ್ಥಾನದಲ್ಲಿ ಇಂದಿಗೂ

ಪೂಜಾರಿಗಳು ನಂಬೂದಿರಿಗಳೇ ಆಗಿದ್ದಾರೆ. ಶಂಕರಾಚಾರ್ಯರು ತಿರುಪತಿಗೆ ಹೋಗಿ ಶ್ರೀ ವೆಂಕಟೇಶ್ವರನ ದರ್ಶನವನ್ನು ಪಡೆದು ಆ ದೇವಸ್ಥಾನದಲ್ಲಿ ಧನಾಕರ್ಷಣ ಯಂತ್ರವನ್ನು ಸ್ಥಾಪಿಸಿದರೆಂದು ಹೇಳುತ್ತಾರೆ. ಶ್ರೀರಂಗದಲ್ಲಿರುವ ಶ್ರೀರಂಗನಾಥನ ಭವ್ಯದೇವಾಲಯದಲ್ಲಿ ಜನರನ್ನು ಆಕರ್ಷಿಸುವ ಜನಾಕರ್ಷಣ ಯಂತ್ರವನ್ನು ಸ್ಥಾಪನೆಮಾಡಿದರು.

ಶಂಕರರು ದರ್ಶನಪಡೆದ ಶೈವದೇವಸ್ಥಾನಗಳಲ್ಲಿ ರಾಮೇಶ್ವರ, ತಿರುವಿದೈಮರುದೂರ್ (ಮಧ್ಯಾರ್ಜುನ), ಚಿದಂಬರ, ಶ್ರೀಶೈಲ, ಉಜ್ಜಯಿನಿ, ನೀಲಕಂಠಕ್ಷೇತ್ರ (ನೇಪಾಲ) ಮತ್ತು ಕೇದಾರ ಕ್ಷೇತ್ರಗಳ ಹೆಸರನ್ನು ಈ ಹಿಂದೆಯೇ ಹೇಳಿದೆ. ಶಂಕರರು ದೇವರ ದರ್ಶನಕ್ಕಾಗಿ ಭೇಟಿಕೊಟ್ಟ ಇತರ ದೇವಸ್ಥಾನಗಳಿವು: ಸೌರಾಷ್ಟ್ರದ ಸೋಮನಾಥ ದೇವಾಲಯ, ಗೋದಾವರಿಯು ಹುಟ್ಟುವ ನಾಸಿಕ ಕ್ಷೇತ್ರದ ತ್ರ್ಯಂಬಕೇಶ್ವರ ದೇವಾಲಯ, ಪಶ್ಚಿಮ ಕರಾವಳಿಯ ಗೋಕರ್ಣ ದೇವಾಲಯ.

ಕರ್ನಾಟಕ ರಾಜ್ಯದಲ್ಲಿರುವ ಹರಿಹರಕ್ಕೆ ಶಂಕರರು ಬಂದಿದ್ದ ಸಂದರ್ಭಕ್ಕೆ ಸಂಬಂಧಿಸಿದಂತೆ ಒಂದು ಸ್ವಾರಸ್ಯವಾದ ಐತಿಹ್ಯವಿದೆ. ಆ ಕಾಲದಲ್ಲಿ ಅದು ಪ್ರಬಲವಾದ ವೈಷ್ಣವ ಕ್ಷೇತ್ರವಾಗಿತ್ತು. ಶಂಕರರು ದೇವಾಲಯದಲ್ಲಿ ದೇವರ ದರ್ಶನವನ್ನು ಪಡೆಯಲು ಅಪೇಕ್ಷಿಪಟ್ಟಾಗ, ದೇವಾಯದ ಅಧಿಕಾರಿಗಳು ಅವರನ್ನು ಕಂಡು ಅವರು ಸಂನ್ಯಾಸಿಯಾಗಿರುವುದರಿಂದಲೂ ಶರೀರದ ಮೇಲೆ ಶೈವಲಾಂಛನಗಳಾದ ವಿಭೂತಿ ರುದ್ರಾಕ್ಷಿಗಳಿದ್ದುದರಿಂದಲೂ ಅವರನ್ನು ಒಳಗೆ ಬಿಡಲು ಒಪ್ಪಲಿಲ್ಲ. ಶಂಕರರು ಶಿವ ವಿಷ್ಣುಗಳಿಗೆ ವ್ಯತ್ಯಾಸವಿಲ್ಲವೆಂದೂ ಆ ದೇವಾಲಯದಲ್ಲಿದ್ದ ವಿಗ್ರಹವು ನಿಜವಾಗಿ ಪರಮಸತ್ಯದ ಪ್ರತಿನಿಧಿಯೆಂದೂ ಸವಿಸ್ತಾರವಾಗಿ ನಿರೂಪಿಸಿದರು. ಅವರ ವಿವರಣೆಯಿಂದ ಸಮಾಧಾನವಾದ ಬಳಿಕ ದೇವಾಲಯದ ದ್ವಾರವನ್ನು ತೆಗೆದು ಅವರಿಗೆ ಒಳಗೆ ಪ್ರವೇಶಮಾಡಲು ಅವಕಾಶಮಾಡಿಕೊಡಲಾಯಿತು. ಆಗ ಆ ವೈಷ್ಣವಭಕ್ತರೆಲ್ಲರಿಗೂ ಆಶ್ಚರ್ಯವಾಗುವಂತೆ ಅಲ್ಲಿನ ವಿಗ್ರಹವು ಹರಿಹರ, ಅಂದರೆ ಅರ್ಧ ವಿಷ್ಣು ಅರ್ಧ ಶಿವ ಆಗಿರುವುದು ಕಂಡುಬಂದಿತು.

ಶಾಕ್ತಪಂಥದ ಪೂಜಾಪದ್ಧತಿಯು ತುಂಬ ಅವನತಿಗಿಳಿದಿದ್ದಿತು; ಅನೇಕ ದೇವಾಲಯಗಳಲ್ಲಿ ಭಗವತೀಮಾತೆಯನ್ನು ರಕ್ತಪಿಪಾಸುವಾದ ದೇವತೆಯನ್ನಾಗಿ ಮಾಡಲಾಗಿತ್ತು. ಶಂಕರರು ಅಲ್ಲಿನ ಪೂಜಾಪದ್ಧತಿಗಳಲ್ಲಿ ಸುಧಾರಣೆಯನ್ನುಂಟುಮಾಡಿ ಉಗ್ರದೇವತೆಯನ್ನು ಸಹಜವಾಗಿ ಕರುಣಾಶಾಲಿನಿಯಾದ ವಿಶ್ವಮಾತೆಯನ್ನಾಗಿ ಮಾಡಿದರು. ಅನೇಕ ದೇವಾಲಯಗಳಲ್ಲಿ ಶ್ರೀಚಕ್ರವನ್ನು ಸ್ಥಾಪಿಸಿ ವಿಶ್ವಸೌಖ್ಯದ ಶಕ್ತಿಯನ್ನು ವೃದ್ಧಿಗೊಳಿಸಿದರು. ಅಲಹಾಬಾದಿನ ದೇವಿಮಂದಿರದಲ್ಲಿಯೂ ಶಂಕರರು ಶ್ರೀಚಕ್ರವನ್ನು ಸ್ಥಾಪಿಸಿದರೆಂದು ಪ್ರತೀತಿಯಿದೆ. ಆ ಸಮಯದಲ್ಲಿ ಪಶ್ಚಿಮ ಕರಾವಳಿಯಲ್ಲಿರುವ ಮೂಕಾಂಬಿಕಾಮೂರ್ತಿಯು ಭಯಂಕರಸ್ವರೂಪವನ್ನು ತಳೆದಿತ್ತು.

ಆ ದೇವಸ್ಥಾನವು ಶಾಕ್ತಪಂಥೀಯರ ಪೂಜಾ ಅಧಿಕಾರಕ್ಕೆ ಒಳಪಟ್ಟಿತ್ತು. ಆ ದೇವಿಯ ಮುಂದುಗಡೆ ಶ್ರೀಚಕ್ರದ ಸ್ಥಾಪನೆಗೆ ಶಂಕರರು ಏರ್ಪಾಟುಮಾಡಿ ಆ ದೇವಿಯು ಸೌಮ್ಯಸ್ವರೂಪವನ್ನು ತಳೆಯುವಂತೆ ಮಾಡಿದರು. ಮದ್ರಾಸು ರಾಜ್ಯದ ತಿರುವ್ವೊರಿಯೂರಿನಲ್ಲಿರುವ ದೇವಸ್ಥಾನದಲ್ಲಿಯೂ ಇದೇ ರೀತಿಯ ಸೇವೆಯನ್ನು ಸಲ್ಲಿಸಿದರು. ಇಂದಿಗೂ ಅಲ್ಲಿನ ತ್ರಿಪುರಸುಂದರೀ ದೇವಾಲಯದಲ್ಲಿ ಪೂಜೆಮಾಡುವವರು ನಂಬೂದಿರಿಗಳೇ ಅಗಿದ್ದಾರೆ. ತ್ಯಾಗರಾಜ ದೇವಾಲಯದ ಒಳಪ್ರಾಕಾರದಲ್ಲಿ ಶಂಕರರ ಒಂದು ವಿಗ್ರಹವಿದೆ. ಮಧುರೆಯ ಮೀನಾಕ್ಷೀ ದೇವಸ್ಥಾನಕ್ಕೂ ತಿರುಚಿಯ ಬಂಡೆಯಮೇಲಿನ ದೇವಸ್ಥಾನಕ್ಕೂ ಶಂಕರರು ಹೋಗಿ ದರ್ಶನಪಡೆದು ಬಂದರು. ಈ ದೇವಸ್ಥಾನಗಳಲ್ಲಿ ಎರಡನೆಯದರಲ್ಲಿರುವ ಸೌಗಂಧಿಕುಂತಲಾಂಬಿಕಾ ಗುಡಿಯ ಗೋಡೆಯ ಮೇಲೆ ಸೌಂದರ್ಯಲಹರಿಯ ಶ್ಲೋಕಗಳನ್ನು ಕೆತ್ತಲಾಗಿದೆ. ದೇವಿ ಕಾಮಾಕ್ಷಿಯು ಪ್ರತಿಷ್ಠೆಯಾಗಿರುವ ಕಂಚಿಯ ದೇವಲಾಯಕ್ಕೆ ಶಂಕರರು ಹೋಗಿಬಂದುದು ಬಹುಮುಖ್ಯವಾದುದು. ಹಿಂದೂ ಭಕ್ತಿಭಾವವು ಕಂಚಿಯನ್ನು ಏಳು ಮೋಕ್ಷಪುರಿಗಳಲ್ಲಿ ಒಂದೆಂದು ಗೌರವಿಸುತ್ತದೆ. (ಮೋಕ್ಷಪುರಿ ಎಂದರೆ ಮೋಕ್ಷಸಿದ್ಧಿಗೆ ಸಹಾಯಕವಾದುದು ಎಂದರ್ಥ) ಕಂಚಿಯು ಪವಿತ್ರತಮವಾದ ದೇವೀಕ್ಷೇತ್ರ. ಅಲ್ಲಿ ವಿಶ್ವಮಾತೆಯು ಅಗೋಚರಳಾಗಿ ಆಕಾಶದಲ್ಲಿ ವ್ಯಾಪಿಸಿದ್ದಾಳೆ. ಶಂಕರರು ಕಂಚಿಯಲ್ಲಿ ಕಾಮಾಕ್ಷಿ ದೇವಸ್ಥಾನಕ್ಕೆ ಹೋದಾಗ ಅಲ್ಲಿ ಗವಿಯೊಂದರಲ್ಲಿ ಅವರಿಗೆ ದೇವಿಯ ದರ್ಶನವಾಯಿತು. ಆ ದೇವತೆಯು ಸೌಮ್ಯಸ್ವರೂಪವನ್ನು ಆವಿಷ್ಕಾರಮಾಡಿಕೊಳ್ಳುವುದಕ್ಕೋಸ್ಕರ ಶಂಕರರು ದೇವಿಯ ವಿಗ್ರಹದ ಮುಂಭಾಗದಲ್ಲಿ ಶ್ರೀಚಕ್ರವನ್ನು ಸ್ಥಾಪಿಸಿದರು. 'ಚಿದ್ವಿಲಾಸೀಯ ಶಂಕರವಿಜಯ'ದಂತೆ ಕಾಮಾಕ್ಷಿಯ ಎದುರಿನಲ್ಲಿ ಶಂಕರರೇ ಶ್ರೀಚಕ್ರವನ್ನು ಬರೆದರು. ಶ್ರೀ ಕಾಮಾಕ್ಷಿಯ ದೇವಸ್ಥಾನದಲ್ಲಿ ಶ್ರೀಚಕ್ರಸ್ಥಾಪನೆಯ ವಿವರವನ್ನೂ ಅದರ ಪ್ರಾಮುಖ್ಯವನ್ನೂ ಆನಂದಗಿರಿಯು ವರ್ಣಿಸಿದ್ದಾನೆ; ಪ್ರಮುಖಪಂಥಗಳ ದೇವಾಲಯಗಳನ್ನು ನೋಡಿ ಬಂದದ್ದಲ್ಲದೆ ಪರಮತತ್ವದ ಬೇರೆಬೇರೆ ಸ್ವರೂಪಾವಿರ್ಭಾವಗಳನ್ನು ಸ್ತುತಿಸಿ ಆಯಾ ಭಕ್ತರ ಸಹಾಯಕ್ಕಾಗಿ ಶಂಕರರು ಸುಂದರವಾದ ಸ್ತೋತ್ರಗಳನ್ನೂ ರಚಿಸಿದರು. ಪ್ರಸಿದ್ಧವಾದ ಇಂಥ ಸ್ತೋತ್ರಗಳಲ್ಲಿ ಶಿವಾನಂದಲಹರಿ, ಸೌಂದರ್ಯಲಹರಿ, ಹರಿಸ್ತುತಿ ಮತ್ತು ದಕ್ಷಿಣಾಮೂರ್ತಿ ಸ್ತೋತ್ರಗಳು ಮುಖ್ಯವಾದುವು.

ಸುಮಾರು 220 ಸ್ತೋತ್ರಗಳು ಶಂಕರರಿಂದ ರಚಿತವಾದುವೆಂದು ಹೇಳುತ್ತಾರೆ. ಅವುಗಳಲ್ಲಿ ಅನೇಕವು ಶಂಕರರಿಂದ ರಚಿತವಾದುವು ಅಲ್ಲದಿರಬಹುದೆಂದು ವಾದಮಾಡುತ್ತಾರೆ. ಆದರೆ ಅವರು ಕೊಡುವ ಕಾರಣಗಳಲ್ಲಿ ಕೆಲವು ಅತೃಪ್ತಿಕರವಾಗಿವೆ. ಈ ಸ್ತೋತ್ರಗಳಲ್ಲಿ "ಸಂಸಾರದ ಕಷ್ಟಗಳನ್ನು ವಿವರಿಸಿ ಭಾವಪೂರ್ಣವಾದ ಭಾಷೆಯಲ್ಲಿ ಮುದಿತನದ ಹಿಂಸೆ ಸಂಸಾರಿಕ ಅಸುಖ ಮುಂತಾದುವನ್ನು

ವಿವರಿಸಿರುವುದರಿಂದ ಇವುಗಳ ಕರ್ತೃ ಶಂಕರಾಚಾರ್ಯರಾಗಿರಲಾರರು."[1] ಇದಕ್ಕೆ ಸಹಜವಾದ ಉತ್ತರವಿಲ್ಲದಿಲ್ಲ. ಸಂಸಾರದ ಕೆಡುಕುಗಳನ್ನು ಅರ್ಥ ಮಾಡಿಕೊಳ್ಳಲು ಸಂಸಾರದ ಸ್ವಾನುಭವವೇ ಆಗಬೇಕಾಗಿಲ್ಲ. ಇಹದಲ್ಲಿ ಸಿಕ್ಕಿಕೊಂಡಿರುವ ನಾವು ಈ ಸ್ತೋತ್ರಗಳನ್ನು ಹಾಡಿಕೊಳ್ಳಬೇಕೆಂಬ ಉದ್ದೇಶದಿಂದ ಶಂಕರರು ಅವುಗಳನ್ನು ರಚಿಸಿದರು. ಆದುದರಿಂದ ನಾವು ಉಪಯೋಗಿಸಬಹುದಾದ ಭಾಷಾಕ್ರಮವನ್ನೇ ಅವರು ಉಪಯೋಗಿಸಿದ್ದಾರೆ. ಶಂಕರರು ಅದ್ವೈತಿಗಳಾದುದರಿಂದ ವ್ಯಕ್ತಿಸ್ವರೂಪದ ದೇವತೆಗಳನ್ನು ಕುರಿತು ಸ್ತುತಿಸುವುದು ಅಸಂಗತವಾಗುವುದೂ ಇಲ್ಲ; ಏಕೆಂದರೆ ಅದ್ವೈತವು ನಾಸ್ತಿಕ್ಯವಲ್ಲ. ದೇವಾಸ್ತಿಕ್ಯ ವಿರೋಧಿಯೂ ಅಲ್ಲ. ಮುಂದಿನ ಅಧ್ಯಾಯದಲ್ಲಿ ದೈವಭಕ್ತಿಯು ಅದ್ವೈತ ಸಾಧನೆಯ ಮುಖ್ಯವಾದ ಅಂಶವೆಂಬುದನ್ನು ನಾವು ಮನಗಾಣಬಹುದು.

ಶಂಕರರ ಹೆಸರಿನಲ್ಲಿರುವ ಕೆಲವು ಸ್ತೋತ್ರಗಳು ಶಂಕರರಚಿತವಲ್ಲದಿರಬಹುದು. ಆದರೂ ನಿರ್ವಿವಾದವಾಗಿ ಶಂಕರರಚಿತವೆಂದು ಹೇಳಲ್ಪಡುವ ಸ್ತೋತ್ರಗಳೂ ಕೂಡ ಅವರು ಪರಮಾತ್ಮನ ಅನೇಕ ಸ್ವರೂಪಗಳನ್ನು ಕುರಿತು ಸ್ತುತಿಸಿರುವುದಕ್ಕೆ ಸಾಕ್ಷಿಯಾಗಿವೆ. ಇದರಿಂದ ಭಕ್ತನು ಸಂಕುಚಿತ ಭಾವನೆಯನ್ನೂ ಹಟಮಾರಿತನವನ್ನೂ ಬಿಟ್ಟು ಪರಸ್ಪರಸಮನ್ವಯದೃಷ್ಟಿಯನ್ನು ಪಡೆಯಬಹುದು.

ನಮ್ಮ ಅದೃಷ್ಟದಿಂದ ಮುಖ್ಯ ಭಾಷ್ಯಗಳ ಯಥಾರ್ಥತೆಯನ್ನು ಕುರಿತು ಯಾರೂ ಪೂರ್ವಪಕ್ಷವನ್ನೆತ್ತಿಲ್ಲ. ಉಪನಿಷತ್ತುಗಳು, ಭಗವದ್ಗೀತೆ ಮತ್ತು ಬ್ರಹ್ಮಸೂತ್ರಗಳು ವೇದಾಂತದ ಮೂಲ ಗ್ರಂಥಗಳು. ಸುಮಾರು ಹತ್ತು ಉಪನಿಷತ್ತುಗಳನ್ನು ಮುಖ್ಯವಾದುವೆಂದು ಕರೆಯುತ್ತಾರೆ. ಬೃಹದಾರಣ್ಯಕ ಮತ್ತು ಛಾಂದೋಗ್ಯಗಳು ತುಂಬ ದೀರ್ಘವಾದ ಉಪನಿಷತ್ತುಗಳು. ಶಂಕರರು ಈ ಎಲ್ಲಾ ಹತ್ತು ಉಪನಿಷತ್ತುಗಳ ಮೇಲೂ ಭಾಷ್ಯವನ್ನು ಬರೆದರು. ಬಹುಶಃ ಇನ್ನೊಂದೆರಡರಮೇಲೂ ಬರೆದಿರಬಹುದು. ಭಗವದ್ಗೀತಾ ಭಾಷ್ಯದಲ್ಲಿ ಹೇಗೆ ಆ ಗ್ರಂಥವೂ ಉಪನಿಷತ್ತಿಗಿಂತ ಕಡಿಮೆಯಲ್ಲದ ರೀತಿಯಲ್ಲಿ ಕರ್ಮ ಸಂನ್ಯಾಸವನ್ನು ಬೋಧಿಸುತ್ತದೆಂಬುದನ್ನು ಅವರು ಸ್ಪಷ್ಟಪಡಿಸಿದ್ದಾರೆ. ಕೇವಲ ಸಂಗತ್ಯಾಗವು ಸಾಲದೆಂಬುದನ್ನು ಹೇಳಿದ್ದಾರೆ. ಕರ್ಮ ಸಂನ್ಯಾಸವೆಂದರೆ ಕರ್ಮಸಾಧಕಗಳಲ್ಲಿ ತನ್ಮಯತೆಯನ್ನು ಬಿಡುವುದೆಂದರ್ಥ. ಸಂಗತ್ಯಾಗವೆಂದರೆ ಕರ್ಮ ಫಲವನ್ನು ತ್ಯಜಿಸುವುದೆಂದರ್ಥ. ಬ್ರಹ್ಮಸೂತ್ರ ಭಾಷ್ಯದಲ್ಲಿ ಬಾದರಾಯಣರು ಬೋಧಿಸುವುದು ಅದ್ವೈತವನ್ನೆಂಬುದನ್ನು ಸ್ಥಾಪಿಸಲು ಶಂಕರರು ಯತ್ನಿಸಿದ್ದಾರೆ. ಭಾಷ್ಯಗಳಲ್ಲದೆ ಶಂಕರರು ಅದ್ವೈತದ ಅನೇಕ ಪ್ರಕರಣ ಗ್ರಂಥಗಳನ್ನು ರಚಿಸಿದ್ದಾರೆ. ಉಪದೇಶಸಾಹಸ್ರೀ, ಆತ್ಮಬೋಧ, ಶತಶ್ಲೋಕೀ, ವಿವೇಕ ಚೂಡಾಮಣಿ ಎಂಬುವು ಜನಪ್ರಿಯವಾದ ಪ್ರಕರಣ ಗ್ರಂಥಗಳಲ್ಲಿ ಕೆಲವು. ಆಚಾರ್ಯರ ಮೇಲ್ಪಂಕ್ತಿಯನ್ನನುಸರಿಸಿ ಅವರ ಶಿಷ್ಯರು

---

1.ಎಸ್.ಕೆ.ಬೆಲ್ವಾಲ್ಕರ್ ಅವರ ಗ್ರಂಥ, ಪುಟ 220.

ಅವರ ಗ್ರಂಥಗಳಿಗೆ ಬರೆದ ವೃತ್ತಿಗಳು ಮತ್ತು ತಾವೇ ಸ್ವಂತವಾಗಿ ರಚಿಸಿದ ಪ್ರಕರಣ ಗ್ರಂಥಗಳು ಇವುಗಳಲ್ಲಿ ಅದ್ವೈತದ ಪ್ರತಿಪಾದನೆಗಳನ್ನು ಮಾಡಿದ್ದಾರೆ.

ಸುರೇಶ್ವರಾಚಾರ್ಯರು ನೈಷ್ಕರ್ಮಸಿದ್ಧಿ ಎಂಬ ಅದ್ವೈತದ ಮುಖ್ಯ ತತ್ತ್ವ ಪ್ರತಿಪಾದಕವಾದ ಗ್ರಂಥವನ್ನು ಬರೆದಿದ್ದಾರೆ. ಮೋಕ್ಷಕ್ಕೆ ಜ್ಞಾನವೇ ನೇರಮಾರ್ಗ; ಕರ್ಮವಲ್ಲ ಎಂಬುದು ಅದರ ಸಾರ. ಸುರೇಶ್ವರರು ಹೀಗೆ ಹೇಳಿದ್ದಾರೆ. "ಸಂಸಾರವನ್ನು ನಾಶಗೊಳಿಸಿ ಪರಮ ಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳುವುದಕ್ಕೆ ಕರೆದೊಯ್ಯುವ ವೇದಾಂತದಲ್ಲಿ ಅಂತರ್ಗತವಾದ ತತ್ತ್ವವನ್ನು ಇತರರು ವಿವರಿಸಿದ್ದರೂ ನಮ್ಮ ಗುರುಗಳ ಅಪ್ಪಣೆಗೆ ವಿಧೇಯನಾಗಿ ನಾನು ಪ್ರತಿಪಾದಿಸಲುಮುಂದೆ ಬಂದಿದ್ದೇನೆ."

ಬೃಹದಾರಣ್ಯಕ ಮತ್ತು ತೈತ್ತಿರೀಯ ಉಪನಿಷತ್ತುಗಳಿಗೆ ಶಂಕರರು ಬರೆದಿರುವ ಭಾಷ್ಯಗಳನ್ನು ಕುರಿತು ದಕ್ಷಿಣಾಮೂರ್ತಿಸ್ತೋತ್ರ ಮುಂತಾದ ಪ್ರಕರಣ ಗ್ರಂಥಗಳನ್ನು ಕುರಿತು ಸುರೇಶ್ವರರು ವಾರ್ತಿಕಗಳನ್ನು ರಚಿಸಿದ್ದಾರೆ. ಈ ವಾರ್ತಿಕಗಳ ದೆಸೆಯಿಂದಲೇ ಸುರೇಶ್ವರರಿಗೆ ವಾರ್ತಿಕಕಾರರೆಂಬ ಹೆಸರು ಬಂದಿದೆ.

ಆಚಾರ್ಯರ ಸೂತ್ರ ಭಾಷ್ಯವನ್ನು ಕುರಿತು ಪದ್ಮಪಾದರು ರಚಿಸಿರುವ ವೃತ್ತಿಯನ್ನು ಕುರಿತು ಸ್ವಾರಸ್ಯವಾದ ಐತಿಹ್ಯವೊಂದಿದೆ. ಅದನ್ನು ರಚಿಸಿದ ಮೇಲೆ ಅವರು ದಕ್ಷಿಣದಲ್ಲಿರುವ ತೀರ್ಥಕ್ಷೇತ್ರಗಳಿಗೆ ಯಾತ್ರೆ ಹೊರಟರಂತೆ. ಕಾಳಹಸ್ತಿ ಮತ್ತು ಚಿದಂಬರ ಕ್ಷೇತ್ರಗಳ ಯಾತ್ರೆಯನ್ನು ಪೂರೈಸಿದಮೇಲೆ ಅವರು ಅವರ ಪೂರ್ವಾಶ್ರಮದ ಸೋದರಮಾವನಿದ್ದ ಶ್ರೀರಂಗಕ್ಷೇತ್ರಕ್ಕೆ ಬಂದರು. ಆ ಸೋದರಮಾವನು ಪ್ರಭಾಕರ ಮೀಮಾಂಸದ ನಿಶ್ಚಲನಾದ ಅನುಯಾಯಿಯಾಗಿದ್ದನು. ಶಂಕರರ ಸೂತ್ರಭಾಷ್ಯವನ್ನು ಕುರಿತು ಸುರೇಶ್ವರರು ರಚಿಸಿದ್ದ ವೃತ್ತಿಯನ್ನು ನೋಡಿ ಆತನಿಗೆ ಒಡನೆಯೇ ಸಂತೋಷವೂ ದುಃಖವೂ ಉಂಟಾದುವು. ಸೋದರಳಿಯನ ವಿದ್ವತ್ತನ್ನು ನೋಡಿ ಸಂತೋಷ, ವೃತ್ತಿಯು ಯಾವ ಮೀಮಾಂಸಕನೂ ಒಪ್ಪದ ವೇದಾಂತವನ್ನು ಕುರಿತಿದ್ದಾದುದರಿಂದ ದುಃಖ. ರಾಮೇಶ್ವರಕ್ಕೆ ಹೋಗುವ ಮುನ್ನಪದ್ಮಪಾದರು ತಮ್ಮ ವೃತ್ತಿಯ ಹಸ್ತ ಪ್ರತಿಯನ್ನು ಸೋದರಮಾವನಲ್ಲಿ ರಕ್ಷಣೆಗಾಗಿ ಬಿಟ್ಟುಹೋದರು. ಪದ್ಮಪಾದರು ಬರುವುದಕ್ಕೆ ಮುಂಚೆಯೇ ಈ ಹಸ್ತ ಪ್ರತಿಯನ್ನು ನಾಶಮಾಡಬೇಕೆನ್ನುವುದು ಆ ಸೋದರಮಾವನ ಆಸೆಯಾಯಿತು. ಆದರೆ ಎಲ್ಲರೆದುರಿಗೆ ಅದನ್ನು ನಾಶಮಾಡುವಷ್ಟು ಧೈರ್ಯವು ಆತನಿಗಿರಲಿಲ್ಲ. ಆದುದರಿಂದ ಅತನು ಹಸ್ತಪ್ರತಿಯಿದ್ದ ತನ್ನ ಮನೆಗೆ ಬೆಂಕಿಹಚ್ಚಿ, ಬೆಂಕಿಬಿದ್ದದ್ದು ಆಕಸ್ಮಿಕವೆನ್ನುವಂತೆ ಮಾಡಿಬಿಟ್ಟನು. ಪದ್ಮಪಾದರು ಶ್ರೀರಂಗಕ್ಕೆ ಹಿಂದಿರುಗಿದಾಗ ಅಪಘಾತದ ಈ ವಿಚಾರ ತಿಳಿಯಿತು. ಅವರಿಗೆ ತುಂಬ ದುಃಖವಾಯಿತು. ಅವರು ಆಚಾರ್ಯರ ಬಳಿಗೆ ಹೋಗಿ ಹಸ್ತಪ್ರತಿಯು ನಾಶವಾದ ವಿಚಾರವನ್ನು ವರದಿಮಾಡಿದರು. ಶಂಕರರು ಅವರನ್ನು ಸಮಾಧಾನಮಾಡಿ ಸೂತ್ರಭಾಷ್ಯದ ಮೊದಲ ಐದು ಪಾದಗಳ

ವೃತ್ತಿಯನ್ನು ತಾವು ನೆನಪಿನಿಂದ ಹೇಳಬಲ್ಲರೆಂದು ತಿಳಿಸಿದರು. ಈ ಭಾಗವನ್ನು ಓದುತ್ತಿದ್ದಾಗ ಶಂಕರರು ಅದನ್ನು ಕೇಳುತ್ತಿದ್ದರು. ಪದ್ಮಪಾದರು ಅದನ್ನು ಬರೆದುಕೊಂಡರು. ಆಚಾರ್ಯರ ಈ ಕರುಣೆಗೆ ಅವರಿಗೆ ತುಂಬ ಕೃತಜ್ಞತೆಯನ್ನರ್ಪಿಸಿದರು. ಮೊದಲ ಐದು ಪಾದಗಳನ್ನು ಮಾತ್ರ ರಕ್ಷಿಸುವುದು ಸಾಧ್ಯವಾದುದರಿಂದ ಅದಕ್ಕೆ 'ಪಂಚಪಾದಿಕಾ' ಎಂಬ ಹೆಸರು ಬಂದಿದೆ. ಇದರಲ್ಲಿಯೂ ಈಗ ಮೊದಲ ನಾಲ್ಕು ಸೂತ್ರಭಾಷ್ಯದ ವೃತ್ತಿಗಳು ಮಾತ್ರ ಸಿಕ್ಕಿವೆ.

ಶಂಕರರ ಸ್ವಂತ ಶಿಷ್ಯರಲ್ಲಿ ಇತರರೂ, ಈ ಉದಾತ್ತವಾದ ಸಂಪ್ರದಾಯದ ಉತ್ತರಾಧಿಕಾರಿಗಳೂ ಅದ್ವೈತ ಸಾಹಿತ್ಯವನ್ನು ವಿಶೇಷವಾಗಿ ಬೆಳೆಸಿದ್ದಾರೆ. ಹಸ್ತಾಮಲಕದ ರಚನೆಯನ್ನೂ ಅದಕ್ಕೆ ಶಂಕರರೇ ಹಸ್ತಾಮಲಕೀಯ ಭಾಷ್ಯ ಎಂಬ ಭಾಷ್ಯವನ್ನು ರಚಿಸಿದರೆಂಬ ಸಾಂಪ್ರದಾಯಿಕವಾದ ಕಥೆಯನ್ನೂ ಈಗಾಗಲೇ ಹೇಳಿಯಾಗಿದೆ. ತೋಟಕಾಚಾರ್ಯರು ತೋಟಕವೃತ್ತದಲ್ಲಿ ಶಂಕರರನ್ನು ಕುರಿತು ಬರೆದ ಸ್ತೋತ್ರವನ್ನು ಕುರಿತು ಹೇಳಿದೆ. ಇದಲ್ಲದೆ ತೋಟಕಾಚಾರ್ಯರು 'ತತ್ವಮಸಿ' ಎಂಬ ಮಹಾವಾಕ್ಯದಲ್ಲಿ ಅಂತರ್ಗತವಾಗಿರುವ ವೇದಾಂತದ ಸಾರವನ್ನು ಶಂಕರರು ವಿವರಿಸಿರುವಂತೆ ಸ್ಪಷ್ಟಪಡಿಸುವ ಒಂದು ಪ್ರಕರಣ ಗ್ರಂಥವನ್ನು ಬರೆದಿದ್ದಾರೆ. ಈ ಗ್ರಂಥಕ್ಕೆ *ಶ್ರುತಿಸಾರ ಸಮುದ್ಧರಣಂ* ಎಂದೂ *ವೇದಾಂತ ವಿದ್ಯಪರತತ್ವ ನಿವೇದನಂ* ಎಂದೂ ಹೆಸರು.

ಅದ್ವೈತದ ಆಶ್ರಯದಲ್ಲಿ ಭಾರತದ ಸಾಂಸ್ಕೃತಿಕ ಐಕ್ಯವನ್ನು ರಕ್ಷಿಸುವುದಕ್ಕೂ ಆಧ್ಯಾತ್ಮಿಕ ಧ್ಯೇಯಗಳನ್ನು ಎತ್ತಿ ಹಿಡಿಯುವುದಕ್ಕೂ ಶಂಕರರು ಮಠದ ಸಂನ್ಯಾಸಿವರ್ಗಗಳನ್ನೂ ಪೀಠಗಳನ್ನೂ ಸ್ಥಾಪಿಸಿದರು. ಹಲವಾರು ಶತಮಾನಗಳು ಕಳೆದರೂ ಅವು ನಡೆದುಕೊಂಡು ಬಂದಿವೆ. ಅದ್ವೈತ ಸಂಪ್ರದಾಯಕ್ಕೆ ಸೇರಿದ ಸಂನ್ಯಾಸಿವರ್ಗಗಳು ಹತ್ತು ಇವೆ. ಪ್ರತಿಯೊಂದು ವರ್ಗಕ್ಕೂ ಸೇರಿದವರ ಸಂನ್ಯಾಸನಾಮಗಳ ಮುಂದೆ ಸೇರುವ ಅಂಕಿತದ ಪ್ರತ್ಯಯದಲ್ಲಿ ಮಾತ್ರ ವ್ಯತ್ಯಾಸವಿದೆ. ಈ ಹತ್ತುವರ್ಗಗಳನ್ನೂ ಒಟ್ಟು 'ದಶನಾಮೀ' ಎಂದು ಕರೆಯುತ್ತಾರೆ. ಈ ಮುಂದೆ ಸೇರುವ ಅಂಕಿತಗಳು ಹೀಗಿವೆ: ಸರಸ್ವತೀ, ಪುರೀ, ಭಾರತೀ, ವನ, ಅರಣ್ಯ, ತೀರ್ಥ, ಆಶ್ರಮ, ಗಿರಿ, ಪರ್ವತ ಮತ್ತು ಸಾಗರ.

ದೇಶದ ಬೇರೆಬೇರೆ ಭಾಗಗಳಲ್ಲಿ ಶಂಕರರು ಮಠಗಳನ್ನು ಸ್ಥಾಪಿಸಿದರು. ತಮ್ಮ ಮುಖ್ಯ ಶಿಷ್ಯರು ಅಲ್ಲಿಯ ಮಠಾಧಿಪತಿಗಳಾಗಿರುವಂತೆ ಮಾಡಿದರು. ಇದರಿಂದ ಪ್ರತಿಯೊಂದು ಮಠದಲ್ಲಿಯೂ ಅದ್ವೈತ ಗುರುಗಳ ಅವಿಚ್ಛಿನ್ನವಾದ ಪರಂಪರೆಯು ಬೆಳೆಯುವುದು ಸಾಧ್ಯವಾಯಿತು. ಆ ಅನೇಕ ಮಠಗಳಲ್ಲಿ ಬಹು ಮುಖ್ಯವಾದುವು ಬದರಿಕ್ಷೇತ್ರ, ದ್ವಾರಕಾಪುರೀ, ಜಗನ್ನಾಥಪುರೀ, ಶೃಂಗೇರಿ ಮತ್ತು ಕಂಚಿ.

ಬದರಿಕಾಶ್ರಮಕ್ಕೂ ಬದರೀಶನ ದೇವಾಲಯಕ್ಕೂ ಶಂಕರರಿಗೂ ಇದ್ದ ನಿಕಟ ಸಂಬಂಧವನ್ನು ಹಿಂದೆಯೇ ಹೇಳಿದೆ. ಭಾರತದ ನಾಲ್ಕು ಮುಖ್ಯ ಕೇಂದ್ರಗಳಲ್ಲಿ

ನಾಲ್ಕು ಪವಿತ್ರ ಧಾಮಗಳಿವೆ. ಉತ್ತರದಲ್ಲಿ ಹಿಮಾಲಯದಲ್ಲಿ ಬದರೀ, ಪಶ್ಚಿಮದಲ್ಲಿ ದ್ವಾರಕಾ, ಪೂರ್ವದಲ್ಲಿ ಜಗನ್ನಾಥಪುರೀ ಮತ್ತು ದಕ್ಷಿಣದಲ್ಲಿ ರಾಮೇಶ್ವರ. ಬದರೀ ಕ್ಷೇತ್ರವು ತಪಸ್ಸಿಗೂ ಜ್ಞಾನಸಾಧನೆಗೂ ಅನುಕೂಲವಾಗಿರುವ ಕ್ಷೇತ್ರ. ಆದುದರಿಂದ ಅದನ್ನು ತಪೋಭೂಮಿ ಎಂದು ವರ್ಣಿಸುತ್ತಾರೆ. ಶ್ರೀಕೃಷ್ಣನು ಉದ್ಧವನಿಗೆ ಕೊನೆಯ ಉಪದೇಶಮಾಡಿದ ಮೇಲೆ ತನ್ನ ಆಶ್ರಮವಾದ ಬದರೀಕ್ಷೇತ್ರಕ್ಕೆ ಹೋಗಬೇಕೆಂದು ಅವನಿಗೆ ಹೇಳಿದನು. ಬದರೀನಾಥನ ದೇವಸ್ಥಾನದ ಎರಡು ಕಡೆಗಳಲ್ಲಿ, ವಿಶ್ವಸೌಖ್ಯಕ್ಕಾಗಿ ನಿರಂತರ ತಪಸ್ಸನ್ನು ಮಾಡುತ್ತಿರುವ ವಿಷ್ಣುವಿನ ಯಮಳ ಅವತಾರಗಳನ್ನು ಪ್ರತಿನಿಧಿಸುವ ನರನಾರಾಯಣ ಪರ್ವತಗಳಿವೆ. ಹಿಂದೆ ಬಹುದೂರದಲ್ಲಿ ವೈಭವೋಪೇತವಾದ ನೀಲಕಂಠ ಶಿಖರವಿದೆ. ಪ್ರಕೃತಿಸೌಂದರ್ಯದ ಮತ್ತು ಆಧ್ಯಾತ್ಮಿಕ ಆವರಣದ ದೃಷ್ಟಿಯಿಂದ ಶಂಕರರು ಬದರಿಯನ್ನು ಒಂದು ಮಠದ ಪೀಠವಾಗಿ ಆರಿಸಿದರು. ಮಠವಿರುವುದು ದೇವಾಲಯದ ದಕ್ಷಿಣಕ್ಕೆ ಹದಿನೆಂಟು ಮೈಲಿಗಳ ದೂರದಲ್ಲಿ. ಆ ಸ್ಥಳಕ್ಕೆ ಮಠದ ಹೆಸರೇ ಇದೆ–ಜ್ಯೋತಿರ್ಮಠ(ಜೋಶಿಮಠ). ಪ್ರತಿ ವರ್ಷವೂ ದೀರ್ಘವಾದ ಚಳಿಗಾಲದಲ್ಲಿ ಬದರಿಯ ದೇವಸ್ಥಾನವೂ ಮಂಜಿನಲ್ಲಿ ಮುಳುಗಿದಾಗ ಬದರಿಯ ಊರೇ ಇಲ್ಲಿಗೆ ಬಂದುಬಿಡುತ್ತದೆ. ಜೋಶಿಮಠದಲ್ಲಿ ಜ್ಯೋತಿರ್ಲಿಂಗ, ಮಹಾದೇವ, ವಾಸುದೇವ ಮತ್ತು ಅಷ್ಟಕಾಳಿಯರ ದೇವಾಲಯಗಳಿವೆ. ಚಳಿಗಾಲದಲ್ಲಿ ಬದರೀಶನನ್ನು, ಶಂಕರರು ನೃಸಿಂಹ ಸಾಲಿಗ್ರಾಮವನ್ನು ಪ್ರತಿಷ್ಠೆಮಾಡಿದ ಸ್ಥಳದಲ್ಲಿ, ಪೂಜಿಸುತ್ತಾರೆ. ಊರಿನ ಮೇಲಿರುವ ಬೆಟ್ಟದ ತುದಿಯಲ್ಲಿ ಸುಂದರ ಆವರಣದ ಮಧ್ಯದಲ್ಲಿ ಜ್ಯೋತಿರ್ಮಠವಿದೆ. ಒಂದು ದೊಡ್ಡ ಮರದ ಕೆಳಗೆ, ಶಂಕರರು ತಪಸ್ಸು ಮಾಡುತ್ತಿದ್ದ ಒಂದು ಗವಿಯಿದೆ. ಉತ್ತರ ಖಂಡವೆಲ್ಲಾ ಅದರೊಡನೆ ಶಂಕರರು ಹೊಂದಿದ್ದ ಸಂಬಂಧದಿಂದ ತುಂಬಿಹೋಗಿದೆ.

ದ್ವಾರಕಾ ಅಥವಾ ದ್ವಾರವತಿಯು ನಾಲ್ಕು ಪವಿತ್ರಧಾಮಗಳಲ್ಲಿ ಒಂದಾಗಿರುವುದಲ್ಲದೆ ಸಪ್ತಮೋಕ್ಷಪುರಿಗಳಲ್ಲಿಯೂ ಒಂದಾಗಿದೆ. ಅದು ಶ್ರೀಕೃಷ್ಣನು ರಾಜ್ಯವಾಳಿದ ನಗರ. ಭಾರತದ ಭೂಶಿರದಲ್ಲಿ ಪಶ್ಚಿಮದ ತುತ್ತತುದಿಯಲ್ಲಿ ಈ ನಗರವಿದೆ. ಈ ನಗರದಲ್ಲಿ ದ್ವಾರಕಾಧೀಶನ (ಶ್ರೀಕೃಷ್ಣನ) ದೇವಸ್ಥಾನವೇ ಬಹುಮುಖ್ಯ ವಿಷಯ. ಶಂಕರರು ದ್ವಾರಕೆಯನ್ನು ಒಂದು ಮಠದ ಪೀಠವಾಗಿ ಆರಿಸಿದರು. ಅಲ್ಲಿ ಸ್ಥಾಪಿಸಿದ ಪೀಠದ ಹೆಸರು 'ಕಾಳಿಕಾ'.

ಹೀಗೆಯೇ ಪೂರ್ವಸಮುದ್ರ ತೀರದಲ್ಲಿ ಜಗನ್ನಾಥಪುರಿಯಲ್ಲಿ ಇನ್ನೊಂದು ಧಾಮವನ್ನೂ, ಒಂದು ಮಠವನ್ನೂ ಶಂಕರರು ಸ್ಥಾಪಿಸಿದರು. ಇದಕ್ಕೆ ಗೋವರ್ಧನಪೀಠ ಎಂದು ಹೆಸರು.

ರಾಜನಾದ ದಶರಥನು ಯಾರ ಮಾರ್ಗದರ್ಶನದಲ್ಲಿ ಪುತ್ರಕಾಮೇಷ್ಟಿಯಾಗವನ್ನು ಮಾಡಿದುದರಿಂದ ರಾಮಚಂದ್ರ ಮತ್ತು ಇತರ ಮೂರು ಮಕ್ಕಳ ಜನನವಾಯಿತೋ

ಆ ಋಷಿಗಳಾದ ಋಷ್ಯಶೃಂಗರಿಗೂ (ಶೃಂಗಗಿರಿ) ಶೃಂಗೇರಿಗೂ ಸಂಬಂಧವಿದೆ. ಈ ಸ್ಥಳವನ್ನು ತುಂಗಭದ್ರೆಯೂ ಅದರ ಸುತ್ತಮುತ್ತಣ ಶಾಂತ ವಾತಾವರಣವೂ ರಮ್ಯವನ್ನಾಗಿ ಮಾಡಿದೆ. ಇಲ್ಲಿ ಶಂಕರರು ಒಂದು ಮಠವನ್ನು ಸ್ಥಾಪಿಸಿದರು. ಈ ಮಠದ ಸ್ಥಾಪನೆಯ ಬಗ್ಗೆ ಒಂದು ಐತಿಹ್ಯವಿದೆ. ಮಂಡನಮಿಶ್ರರು ಸುರೇಶ್ವರರೆಂಬ ಹೆಸರಿನಿಂದ ಶಂಕರರ ಶಿಷ್ಯರಾದಾಗ ಸರಸ್ವತಿಯು ಶಂಕರರ ಪರಿವಾರದಲ್ಲಿ ಸೇರಿದಳೆಂಬುದನ್ನು ಆಗಲೇ ಬಲ್ಲೆವು. ಆದರೆ ಅವಳು ಆಚಾರ್ಯರ ಪರಿವಾರದೊಡನೆ ಬರುವುದಕ್ಕೆ ಒಂದು ಕಟ್ಟುಪಾಡುಹಾಕಿದಳು–ತಾನು ಬರುತ್ತಿದ್ದೆನೋ ಇಲ್ಲವೋ ಎಂದು ಶಂಕರರು ಹಿಂದಿರುಗಿ ನೋಡಬಾರದು ಎಂದು. ಈ ಪರಿವಾರದ ಗುಂಪು ತುಂಗಭದ್ರಾತೀರಕ್ಕೆ ಬಂದಾಗ ಸರಸ್ವತಿಯ ಕಾಲುಗಳು ನೆಲದಲ್ಲಿ ಸಿಕ್ಕಿಕೊಂಡವು; ಅಲ್ಲಿಂದ ಅವಳಿಗೆ ಚಲಿಸಲು ಆಗಲಿಲ್ಲ. ಆಕೆಯ ಕಾಲ್ಗಡಗಗಳ ಧ್ವನಿಯು ಕೇಳದಿದ್ದುದರಿಂದ ಶಂಕರರು ಹಿಂದಿರುಗಿ ನೋಡಿದರು. ಶಾರದಾದೇವಿಯ ಅವತಾರವಾಗಿದ್ದ ಸರಸ್ವತಿಯು ಆರಿಸಿಕೊಂಡ ವಸತಿ ಶೃಂಗೇರಿಯೇ ಎಂದು ಆಗ ಅವರಿಗೆ ಗೊತ್ತಾಯಿತು. ಹೀಗೆ ಅಲ್ಲಿ ಶಾರದಾಪೀಠವೂ, ಒಂದು ಮಠವೂ ಸ್ಥಾಪಿತವಾದುವು.

ಕಂಚಿಯೊಡನೆ ಶಂಕರರಿಗಿದ್ದ ಸಂಬಂಧವನ್ನು ಆಗಲೇ ನಿರೂಪಿಸಲಾಗಿದೆ. ಕಾಮಾಕ್ಷಿ ಕಾಮಕೋಟಿಯ ಹೆಸರಿನಲ್ಲಿ ಶಂಕರರು ಒಂದು ಪೀಠವನ್ನು ಸ್ಥಾಪಿಸಿದರು[1] ಎಂದೂ ಪ್ರಸಿದ್ಧವಾಗಿರುವ ಕಂಚಿಯಿಂದ ಅವರ ಶಿಷ್ಯರು ಕೆಲವರು ದೇಶವನ್ನು ಸಂಚರಿಸಲು ಹೊರಟರೆಂದೂ ಆನಂದಗಿರಿ ಹೇಳುತ್ತಾನೆ. ಅವರು ಈ ಹಿಂದೆ ಬೇರೆ ಬೇರೆ ಪಂಥಗಳಿಗೆ ಸೇರಿದವರಾಗಿದ್ದರೂ ಈಗ ತಮ್ಮ ತಮ್ಮ ಅಭಿಪ್ರಾಯಗಳನ್ನು ಅದ್ವೈತದ ಸಹಾಯದಿಂದ ಶುದ್ಧಗೊಳಿಸಿಕೊಂಡು, ಆಚಾರ್ಯರ ಆಶೀರ್ವಾದವನ್ನು ಪಡೆದು ಆ ಅಭಿಪ್ರಾಯಗಳನ್ನು ಪ್ರಚಾರ ಮಾಡಲು ಹೊರಟರು. ಅವರೆಲ್ಲರೂ ಅದ್ವೈತದಲ್ಲಿ ದೃಢವಾದ ಶ್ರದ್ಧೆಯುಳ್ಳ ಪರಮಹಂಸ ಸನ್ಯಾಸಿಗಳಾಗಿದ್ದರು. ಸಗುಣಪೂಜೆಗೆ ಸಂಬಂಧಿಸಿದಂತೆ ಪ್ರತಿಯೊಬ್ಬರೂ ವಿಷ್ಣು, ಶಿವ, ಶಕ್ತಿ ಮುಂತಾದ ಇಷ್ಟದೇವತೆಯನ್ನು ಹೊಂದಿದ್ದರು. ಪರಮಾತ್ಮನ ಅದ್ವೈತಭಾವವನ್ನು ಒಪ್ಪಿ, ದೇವತಾ ಸ್ವರೂಪದ ಬಗ್ಗೆ ಅವರು ತಮ್ಮ ಇಷ್ಟವನ್ನು ಅನುಸರಿಸುತ್ತಿದ್ದರು.

---

1.ಶಂಕರರು ಸ್ಥಾಪಿಸಿದ ಮಠ ಅಥವಾ ಪೀಠಗಳ ವಿಚಾರದಲ್ಲಿ ಭಿನ್ನಾಭಿಪ್ರಾಯವಿದೆ. ಶಂಕರಭಕ್ತರಲ್ಲಿ ಅನೇಕರು ಅವರು ಬದರಿನಾಥ, ದ್ವಾರಕಾ, ಪುರೀ ಮತ್ತು ಶೃಂಗೇರಿ ಎಂಬ ಕಡೆಗಳಲ್ಲಿ ಮಾತ್ರ ಪೀಠಗಳನ್ನೂ ಮಠಗಳನ್ನೂ ಸ್ಥಾಪಿಸಿದರೆಂದು ನಂಬಿದ್ದಾರೆ ಮತ್ತು ಸಾರುತ್ತಾರೆ. ಆದರೂ ಮತ್ತೆ ಕೆಲವರು ಕಂಚಿಯಲ್ಲಿಯೂ ಐದನೆಯ ಪೀಠವನ್ನೂ ಮಠವನ್ನೂ ಸ್ಥಾಪಿಸಿದರೆಂದು ವಾದಮಾಡುತ್ತಾರೆ. ಕೆಲವು ಭಕ್ತರ ಪ್ರಕಾರ ಶಂಕರರು ಸರ್ವಜ್ಞಪೀಠವನ್ನು ಆರೋಹಣ ಮಾಡಿದುದು ಕಂಚಿಯಲ್ಲಿ.

–ಸಂಪಾದಕರು.

ತಮ್ಮ ಬೇರೆ ಬೇರೆ ಮತಗಳನ್ನು ಬೋಧಿಸಲು ಅವರು ಆಚಾರ್ಯರ ಅನುಮತಿಯನ್ನು ಕೇಳಿದರು. ಆಚಾರ್ಯರು ತಮ್ಮ ಒಪ್ಪಿಗೆಯನ್ನು ಕೂಡಲೆ ಸೂಚಿಸಿದರು. ಜನರ ನಂಬಿಕೆಯನ್ನು ದೃಢಗೊಳಿಸುವ ಉದ್ದೇಶದಿಂದ ದೇಶವನ್ನು ಸಂಚರಿಸಲು ಅಪೇಕ್ಷಿಸಿದ ಶಿಷ್ಯರಲ್ಲಿ ಪರಮತಕಾಲಾನಲನು ಶೈವನಾಗಿದ್ದನು, ಲಕ್ಷ್ಮಣ ಮತ್ತು ಹಸ್ತಾಮಲಕರು ವೈಷ್ಣವರಾಗಿದ್ದರು, ದಿವಾಕರನು ಸೂರ್ಯಮತವನ್ನನುಸರಿಸುವ ಸೌರನಾಗಿದ್ದನು. ತ್ರಿಪುರಕುಮಾರನು ಶಾಕ್ತ, ಗಿರಿಜಾಕುಮಾರನು ಗಾಣಾಪತ್ಯ, ವಟುಕನಾಥನು ಕಾಪಾಲಿಕ. ಅವರು ದೇಶದಲ್ಲಿ ಸಂಚರಿಸಿ, ಅದ್ವೈತತತ್ವದ ಆಧಾರದ ಮೇಲೆ ತಮ್ಮತಮ್ಮ ಪಂಥಗಳನ್ನು ಪ್ರಚಾರಮಾಡಿ, ತಮ್ಮ ಗುರುಗಳೊಡನಿರಲು ಕಂಚಿಗೆ ಹಿಂತಿರುಗಿದರು.

ಆನಂದಗಿರಿಯ ಪ್ರಕಾರ ಶಂಕರರು ಕಡೆಯ ದಿನಗಳನ್ನು ಕಂಚಿಯಲ್ಲಿ ಕಳೆದರು, ಅಲ್ಲಿಯೇ ಕಳೇಬರವನ್ನು ತ್ಯಜಿಸಿದರು. ಆನಂದಗಿರಿಯ *ಶಂಕರ ವಿಜಯ*ವಲ್ಲದೆ *ಶಿವರಹಸ್ಯ*, *ಪತಂಜಲಿ ಚರಿತ*, *ಶಂಕರಾಭ್ಯುದಯ* ಮುಂತಾದ ಆಧಾರಗಳೂ ಕೂಡ ಶಂಕರರು ತಮ್ಮ ಕಡೆಯ ದಿನಗಳನ್ನು ಕಂಚಿಯಲ್ಲಿ ಕಳೆದರೆಂದು ಹೇಳುತ್ತವೆ. ಕಾಮಾಕ್ಷಿಯ ಗರ್ಭಗುಡಿಯ ಹತ್ತಿರದಲ್ಲಿ ಒಂದು ದೇವಾಲಯದಲ್ಲಿ ಶಂಕರಾಚಾರ್ಯರ ಆಳೆತ್ತರದ ಕಲ್ಲಿನ ವಿಗ್ರಹವಿದೆ. ಈ ದೇವಾಲಯದಲ್ಲಿರುವ ಶಂಕರರ ಕಂಚಿನ ಉತ್ಸವ ಮೂರ್ತಿಯನ್ನು ಪ್ರತಿವರ್ಷವೂ ವ್ಯಾಸಪೂಜಾಕಾಲದಲ್ಲಿ ಸರ್ವತೀರ್ಥದ ತೀರದಲ್ಲಿರುವ ಮಂಟಪಕ್ಕೆ ಬಿಜಯಮಾಡಿಸಿ ಅಲ್ಲಿ ಪೂಜೆಯನ್ನು ಸಲ್ಲಿಸುತ್ತಾರೆ. ಕಂಚಿಯಲ್ಲಿರುವ ಎಲ್ಲ ಪಂಥಗಳವರ ದೇವಾಲಯಗಳಲ್ಲಿಯೂ ಬೇರೆಬೇರೆ ಭಂಗಿಗಳಲ್ಲಿರುವ ಆಚಾರ್ಯರ ಶಿಲ್ಪವಿಗ್ರಹಗಳಿವೆ. ಕಂಚಿಯಲ್ಲಿ ಶಂಕರರಿದ್ದುದು ಆ ಕ್ಷೇತ್ರದಲ್ಲಿ ಅವಿನಾಶಿಯಾದ ಪ್ರಭಾವವನ್ನು ಬೀರಿದೆ, ಅಲ್ಲದೆ ಕಾಲವು ಗತಿಸಿದಂತೆಲ್ಲ ಮತ್ತಷ್ಟು ಗಾಢವಾಗುತ್ತಿದೆಯೆಂಬ ಅಂಶವನ್ನು ಈ ಶಿಲ್ಪಕಲಾಕೃತಿಗಳು ಸ್ಪಷ್ಟಪಡಿಸುತ್ತವೆ.

ಆದರೂ, ಶಂಕರರು ಈ ದೇಹವನ್ನು ತ್ಯಜಿಸಿ ಸಿದ್ಧಿಪಡೆದ ಕ್ಷೇತ್ರವು ಕಂಚಿಯಾಗಿರದೆ ಬೇರೆ ಸ್ಥಳವಾಗಿತ್ತೆಂದು ಕೆಲವು ಆಧಾರಗಳು ತಿಳಿಸುತ್ತವೆ. (1) ಕೇದಾರ: ಮಾಧವೀಯ *ಶಂಕರ ವಿಜಯ* ದಲ್ಲಿ, ಶಂಕರರು ತಮ್ಮ ಆಯುಷ್ಯದ ಕೊನೆಯಲ್ಲಿ ಕೆಲವು ಶಿಷ್ಯರೊಡನೆ ಬದರಿಗೂ ಅಲ್ಲಿಂದ ಕೇದಾರಕ್ಕೂ ಹೋಗಿ ಅಲ್ಲಿಂದ ಮುಂದೆ ಕೈಲಾಸಕ್ಕೆ ಹಿಂದಿರುಗಿದರೆಂದು ಹೇಳಿದೆ. (2) ಬದರಿ: ಚಿದ್ವಿಲಾಸೀಯ *ಶಂಕರ* ವಿಜಯದಲ್ಲಿ ಶಂಕರರು ಕೊನೆಗೆ ಬದರಿಕಾಶ್ರಮದಲ್ಲಿ ದತ್ತಾತ್ರೇಯರ ಗುಹೆಯನ್ನು ಪ್ರವೇಶಿಸಿದರೆಂದು ಹೇಳಿದೆ. (3) ಮಾಹುರೀಪುರೀ: ಶೃಂಗೇರಿಯ ಗುರುಪರಂಪರೆಯನ್ನು ವಿವರಿಸುವ *ಗುರುವಂಶಕಾವ್ಯ* ನಿವು ಶಂಕರರು ತಮ್ಮ ಕಡೆಯ ದಿನಗಳಲ್ಲಿ ನೇಪಾಳದ ಸಿದ್ಧೇಶ್ವರದಿಂದ ದತ್ತಾತ್ರೇಯಾಶ್ರಮಕ್ಕೆ ಬಂದು ಅಲ್ಲಿ ದಂಡ ಕಮಂಡಲುಗಳನ್ನು ತ್ಯಜಿಸಿದರೆಂದೂ ಅವು ಒಂದು ವೃಕ್ಷ

ಮತ್ತು ಸರೋವರಗಳಾಗಿ ರೂಪು ಧರಿಸಿದವೆಂದೂ ಹೇಳುತ್ತವೆ. ಅಲ್ಲದೆ ಮರಾಠವಾಡದ ಮಾಹುರೀಪುರಿಯಲ್ಲಿ ಶ್ರೀ ದತ್ತಾತ್ರೇಯರೊಡನೆ ಸಂಭಾಷಣೆ ನಡೆಸುತ್ತಾ ಅಲ್ಲಿದ್ದರೆಂದು ಹೇಳುತ್ತದೆ. (4) ತ್ರಿಚೂರು: ಗೋವಿಂದನಾಥನ *ಕೇರಳೀಯ ಶಂಕರ ವಿಜಯ*ದಂತೆ ಶಂಕರರು ತ್ರಿಚೂರಿನ ವೃಷಾಚಲ ದೇವಸ್ಥಾನದ ಗರ್ಭಗುಡಿಯಿಂದ ಸೂರ್ಯಮಂಡಲಕ್ಕೆ ಆರೋಹಣ ಮಾಡಿದರೆಂದು ತಿಳಿದುಬರುತ್ತದೆ. (5) ಕಾಶ್ಮೀರ: ಶ್ರೀನಿವಾಸ ಅಲಯ ಎಂಬ ಲೇಖಕರು ಬರೆದಿರುವ ಸಂಸ್ಕೃತದ ಶಂಕರ ಜೀವನಚರಿತೆಯಲ್ಲಿ 'ಶಂಕರರು ಕೊನೆಗೆ ಕಂಡುಬಂದುದು ಕಾಶ್ಮೀರದಲ್ಲಿ' ಎಂಬ ಹೇಳಿಕೆಯಿದೆ.

ಆದರೆ ಅನುಭವವಾದದ ದೃಷ್ಟಿಯಿಂದ ಆಲೋಚಿಸಿದರೂ ಅವರಿಗೆ ಅವಸಾನವೆಂಬುದಿಲ್ಲ. ಅವರು ಮಾನವರ ಸ್ಮರಣೆಯಲ್ಲಿ ಜೀವಿಸಿದ್ದಾರೆ, ಮುಂದೆಯೂ ಜೀವಿಸುತ್ತಾರೆ. ಪರಮಾರ್ಥದಲ್ಲಿ ಹೇಳುವುದಾದರೆ, ಅವರು ಸರ್ವಾಂತರ್ಯಾಮಿಯಾದ ಶಾಶ್ವತವಾದ ಅದ್ವೈತವಾದ ಚಿನ್ಮಯ. ಆನಂದಗಿರಿ ಹೇಳುವಂತೆ "ಸರ್ವಾಂತರ್ಯಾಮಿಯಾದ ಚೇತನದಲ್ಲಿ ಅವರು ಇಂದೂ ಇದ್ದಾರೆ. ಸಜ್ಜನರಿಗೆ ಮೋಕ್ಷವನ್ನು ಕೊಡುವ ಗುರು ಶಂಕರಾಚಾರ್ಯರು ಅವರೇ."

# 5. ಶಾಂಕರಸಿದ್ಧಾಂತ

ಶಾಶ್ವತದೆಡೆಗೆ ಮಾರ್ಗಾನ್ವೇಷಣೆ ಮಾಡಿದವರಲ್ಲಿ ಶಂಕರರು ತುಂಬ ಶ್ರೇಷ್ಠರಾದವರು. ಅವರು ಅಲ್ಪಾಯುಷಿಯಾದರೂ ಆ ಬಾಳನ್ನೆಲ್ಲ ಸಹಜೀವಿಗಳಿಗೆ ಬೋಧಿಸಲು-ಅಲ್ಪಕಾಲಿಕವಾದುದನ್ನು ಬಿಟ್ಟು ಶಾಶ್ವತದ ಕಡೆಗೆ, ಐಹಿಕಜೀವನದ ನಶ್ವರವಾದ ದೃಶ್ಯ ಪರಂಪರೆಯನ್ನು ಬಿಟ್ಟು ಶಾಶ್ವತವಾದ ಬಾಳಿನ ಆಧ್ಯಾತ್ಮಿಕ ಆನಂದದ ಕಡೆಗೆ ತಿರುಗಿಸುವಂತೆ ಉಪದೇಶಿಸಲು ಉಪಯೋಗಿಸಿದರೆಂಬುದನ್ನು ನಾವೀಗ ಕಂಡಿದ್ದೇವೆ. ನಮ್ಮನ್ನು ಪ್ರಚೋದಿಸುವ ವಿಷಯಗಳು ಹಸಿವು ದ್ವೇಷಗಳಿರುವ ತನಕ, ಬಹಿರಂಗವಾದ, ಇಂದ್ರಿಯ ವಿಷಯಗಳ ಕಡೆಗೆ ಗಮನ ಕೊಡುವುದೇ ನಮ್ಮ ಕ್ರಿಯೆಯಾಗಿರುವ ತನಕ, ಪ್ರಾಣಿಗಳ ವ್ಯವಹಾರಕ್ಕೂ ಮಾನವರ ವ್ಯವಹಾರಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಆದರೆ ಸರಿಯಾಗಿ ಸಂಸ್ಕಾರಗೊಳಿಸಿದ ವ್ಯತ್ಯಾಸವನ್ನುಂಟುಮಾಡುವ ಕೆಲವು ಗುಣಶೀಲಗಳು ಮಾನವನಿಗೆ ದತ್ತವಾಗಿವೆ. ಈ ಸ್ವಭಾವವೇ ಕರ್ಮಜ್ಞಾನಿಗಳಿಗೆ ಅರ್ಹತೆಯನ್ನು ನೀಡುತ್ತವೆ ಎಂದು ಹೇಳಿ ಶಂಕರರು ಅದಕ್ಕೆ ಪೋಷಕವಾಗಿ ಉಪನಿಷತ್ತಿನ ವಾಣಿಯನ್ನು ಉದ್ಧರಿಸುತ್ತಾರೆ.[1] "ಆತ್ಮವು ಮಾನವರಲ್ಲಿ ಮಾತ್ರ ಉದಯವಾಗುತ್ತದೆ. ಅವನಿಗೇ ಬುದ್ಧಿಯು ದತ್ತವಾಗಿದೆ. ತಾನು ಅರಿತುದಕ್ಕೆ ಅಭಿವ್ಯಕ್ತಿ ಕೊಡಬಲ್ಲನು. ಅರಿತಿರುವುದನ್ನು ನೋಡಬಲ್ಲನು. ಮುಂಬರುವುದನ್ನು ಅರಿಯಬಲ್ಲನು. ದೃಷ್ಟಾದೃಷ್ಟ ಪ್ರಪಂಚವನ್ನು ಅವನು ಬಲ್ಲನು. ನಶ್ವರದ ಮೂಲಕ ಅವನು ಶಾಶ್ವತವಾದುದನ್ನು ಅರ್ಥಮಾಡಿಕೊಳ್ಳಬಲ್ಲನು. ಇದು ಅವನಿಗೆ ದತ್ತವಾಗಿದೆ. ಆದರೆ ತಿನ್ನುವುದು ಕುಡಿಯುವುದು-ಇವು ಮಾತ್ರ ಇತರ ಪ್ರಾಣಿಗಳಿಗಿರುವ ಜ್ಞಾನವಾಗಿದೆ." ಸತ್ಯವನ್ನು ಬೇರೆಮಾಡಿ ಅರ್ಥಮಾಡಿಕೊಳ್ಳುವ ಶಕ್ತಿಯಿರುವುದರಿಂದಲೇ ಮಾನವನು ಶಾಶ್ವತವಸ್ತುವಿನ ಅನ್ವೇಷಣೆಗೆ ತೊಡಗುತ್ತಾನೆ. ಅಷ್ಟೇ ಅಲ್ಲದೆ ಕೊನೆಗೆ ಅದನ್ನು ಸಾಧಿಸುವುದರಲ್ಲಿಯೂ ಯಶಸ್ವಿಯಾಗುತ್ತಾನೆ. ಈ ಮೋಕ್ಷಮಾರ್ಗವನ್ನು ಶಂಕರರು ಕೇವಲ ಉಪದೇಶದಿಂದಲ್ಲದೆ ಪ್ರಕಾಶಮಾನವಾದ ಸ್ವಂತ ದೃಷ್ಟಾಂತದಿಂದಲೂ ತೋರಿಸಿ ಕೊಟ್ಟರು.

ಭಾರತೀಯ ವೇದಾಂತದ ಚರಿತ್ರೆಯಲ್ಲಿ ಶಂಕರರ ಸ್ಥಾನ ಶಾಶ್ವತವೂ ಉನ್ನತವೂ ಆದುದು. ತಮ್ಮದೇನೂ ಸ್ವತಂತ್ರವಾದುದು ಇಲ್ಲವೆಂದು ಅವರು ಹೇಳಿದರೂ

---

1.ಐತರೇಯ ಆರಣ್ಯಕ, III, ii, 3.

ಮಾನವನ ಮನಸ್ಸಿನಲ್ಲಿ ಅವರು ಒಂದು ಕ್ರಾಂತಿಯನ್ನುಂಟುಮಾಡಿದರು. ಅದರ ಸತ್ಪರಿಣಾಮಗಳನ್ನು ನಾವು ಇಂದೂ ಕಾಣಬಹುದಾಗಿದೆ. ಅವರು ಆಲೋಚನೆಮಾಡುವುದಕ್ಕೂ ಪ್ರತಿಪಾದನೆ ಮಾಡುವುದಕ್ಕೂ ಒಂದು ಮೇಲ್ಪಂಕ್ತಿಯನ್ನು ಹಾಕಿದರು. ಅವರ ಮುಂದಿನ ವೇದಾಂತಿಗಳು ಅವರನ್ನು ಅನುಸರಿಸಲು ಶ್ರಮಿಸಿದ್ದಾರೆ. ಉದಾತ್ತರಾದ ಆಧ್ಯಾತ್ಮ ಶಾಸ್ತ್ರಜ್ಞರೊಬ್ಬರು ಶಂಕರರ ರಚನೆಗಳ ಶೈಲಿಯನ್ನು ಪ್ರಸನ್ನ ಗಂಭೀರ ಎಂದು ಕರೆದಿದ್ದಾರೆ. ಅವರ ಗ್ರಂಥಗಳಲ್ಲಿ ಆಳವಾದ ಚಿಂತನೆಯೂ ವಿಶ್ಲೇಷಣಾ ಚಾತುರ್ಯವೂ ಕಂಡುಬರುತ್ತವೆ. ಅವರು ಬೋಧಿಸಿದ ಪರಮತತ್ವದ ಆಧ್ಯಾತ್ಮಸ್ವರೂಪವನ್ನು ಅರ್ಥ ಮಾಡಿಕೊಳ್ಳುವುದು ಕಠಿಣವೆಂಬುದು ನಿಜ. ಅದನ್ನು ಪ್ರತಿಪಾದಿಸುವ ಯಾವ ಪ್ರಯತ್ನದಲ್ಲಿಯೂ ಅಸ್ಪಷ್ಟತೆಯ ಅಭಿವ್ಯಕ್ತಿಯಿರಲೇಬೇಕಾಗುತ್ತದೆ. ಆದರೆ ಶಂಕರರ ಪ್ರತಿಪಾದನಾಕ್ರಮದಲ್ಲಿ ಸಂದೇಹಾತ್ಮಕವಾದ ಮಾತುಗಳು ಇರುವುದಿಲ್ಲವಾದುದರಿಂದ ಅಲ್ಲಿ ಸಾಧಾರಣವಾದ ಅಭಿವ್ಯಕ್ತಿಯ ತೊಂದರೆಗಳಿಲ್ಲ. ಗದ್ಯದಲ್ಲಿಯೂ ಪದ್ಯದಲ್ಲಿಯೂ ಅವರು ಉದಾತ್ತಗ್ರಂಥಗಳನ್ನು ರಚಿಸಿದರು. ಅವೆಲ್ಲದರಲ್ಲಿಯೂ ಆಳವಾದ ವಿಚಾರವೂ ಪ್ರಸನ್ನ ಪದಪುಂಜವೂ ಕಂಡುಬರುತ್ತವೆ. ಅವರ ಮುಖ್ಯಗ್ರಂಥಗಳಲ್ಲಿ, ವೇದಾಂತದ 'ಪ್ರಸ್ಥಾನತ್ರಯ'ವೆಂದು ಪ್ರಸಿದ್ಧವಾಗಿರುವ ಮುಖ್ಯ ಉಪನಿಷತ್ತುಗಳು, ಭಗವದ್ಗೀತೆ ಮತ್ತು ಬ್ರಹ್ಮಸೂತ್ರಗಳ ಮೇಲೆ ರಚಿಸಿದ ಭಾಷ್ಯಗಳೂ *ಉಪದೇಶ ಸಾಹಸ್ರೀ* ಮತ್ತು *ವಿವೇಕ ಚೂಡಾಮಣಿ* ಎಂಬುವೂ ಸೇರಿವೆ.

ಶಂಕರರ ಸಿದ್ಧಾಂತದ ಸಾರವೆಲ್ಲ ಸಂಸ್ಕೃತದಲ್ಲಿ ಒಂದು ಶ್ಲೋಕಾರ್ಧವಾಗುವ, "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ" ಎಂಬ ಮಾತುಗಳಲ್ಲಿ ಅಡಗಿದೆ. (ಬ್ರಹ್ಮವೊಂದೇ ಸತ್ಯ, ಜಗತ್ತು ಮಿಥ್ಯಾರೂಪವಾದದ್ದು. ಜೀವನೂ ಬ್ರಹ್ಮನೇ; ಬೇರೆಯಲ್ಲ)

ಉಪನಿಷತ್ತಿನ ಮಾತುಗಳಾದ 'ಬ್ರಹ್ಮ' ಮತ್ತು 'ಆತ್ಮ' ಎಂಬ ಪದಗಳು ಅದ್ವೈತ ಪರಮಸತ್ಯವನ್ನು ತಿಳಿಸುತ್ತವೆ. ಪರಮ ಸತ್ಯಸ್ವರೂಪವನ್ನು ನಿರುಪಾಧಿಕವಾಗಿ ಸೂತ್ರೀಕರಿಸುವುದು ಅಸಾಧ್ಯವಾದುದರಿಂದ ಉಪನಿಷತ್ತುಗಳು ಅದನ್ನು 'ನೇತಿ ನೇತಿ' (ಇದಲ್ಲ ಇದಲ್ಲ) ಎಂದು ವ್ಯವಹರಿಸುತ್ತವೆ. ಆದರೆ ಪರಮಸತ್ಯವು ಇಲ್ಲಮೆಯ ಕಗ್ಗತ್ತಲೆಯಲ್ಲ; ಅಭಾವದ ಶೂನ್ಯವಲ್ಲ. ಸರ್ವಾಂತರ್ಯಾಮಿಯೇ ಪರಮಸತ್ಯ. ಉಪನಿಷತ್ತಿನ ಸೂತ್ರಗಳಲ್ಲಿ ಬ್ರಹ್ಮನನ್ನು ಕುರಿತು ಸತ್ಯ, ಜ್ಞಾನ, ಆನಂದ ಮುಂತಾದ ಸ್ಪಷ್ಟವಾದ ಶಬ್ದಗಳನ್ನು ಉಪಯೋಗಿಸಲಾಗಿದೆ. ಇವೂ ಕೂಡ ಅಸತ್ಯ, ಅಜ್ಞಾನ, ಅಸುಖವಲ್ಲದ್ದು ಪರಮಾತ್ಮ ಎಂದೇ, 'ನೇತಿ' ಎಂದೇ ಹೇಳಿ ನಾವು ಸತ್ಯವನ್ನು ತಿಳಿಯುವಂತೆ ಮಾಡುತ್ತದೆ. ಒಂದು ವಸ್ತುವನ್ನು ಸೂತ್ರಬದ್ಧ ಮಾಡುವುದು ಎಂದರೆ ಅದಕ್ಕೆ ಮಿತಿಯೊಡ್ಡುವುದು, ಚಿಕ್ಕದು ಮಾಡುವುದು ಎಂದೇ ಅರ್ಥ. ಅನಂತವಾದುದನ್ನು ಅಸೀಮವಾದುದನ್ನು ಸ್ಪಷ್ಟ ಉಪಾಧಿಗಳಿಂದ

ಗುರುತಿಸುವುದು ಅಸಾಧ್ಯ. ಬ್ರಹ್ಮವು ನಿರ್ಗುಣವಾದುದು, ಅದು ಒಂದು ಎಂದು ಹೇಳುವುದು ಕೂಡ ಅಷ್ಟು ಸರಿಯಾಗುವುದಿಲ್ಲ; ಏಕೆಂದರೆ ಸಂಖ್ಯೆಯ ಉಪಾಧಿಯೂ ಕೂಡ ಪರಮ ಸತ್ಯಕ್ಕೆ ಒಪ್ಪುವುದಿಲ್ಲ. ಅದುದರಿಂದಲೇ ಶಂಕರರು ತಮ್ಮ ಸಿದ್ಧಾಂತವನ್ನು ಅದ್ವೈತ-ಎರಡಿಲ್ಲದ್ದು - ಎಂದು ಕರೆದಿದ್ದಾರೆ.

ಬ್ರಹ್ಮನನ್ನು ಜಗತ್ಕಾರಣ, ಮಂಗಳಸದನ ಎಂದು ವಿವರಿಸುವ ಉಪನಿಷದ್ವಾಕ್ಯಗಳಿವೆ. ಬ್ರಹ್ಮನು ಪರಮಸತ್ಯ ಮತ್ತು ನಿರ್ಗುಣ ಎಂಬ ಅಭಿಪ್ರಾಯವನ್ನು ಸಮೀಕರಿಸುವುದು ಹೇಗೆ? ಈ ಸಮಸ್ಯೆಯ ಪರಿಹಾರಕ್ಕೆ ಶಂಕರರು ಎರಡು ಪ್ರಕಾರದ ಸತ್ವವನ್ನು ಅಧಿಕಾರವಾಗಿಡುತ್ತಾರೆ. (1) ಪಾರಮಾರ್ಥಿಕ, (2) ವ್ಯಾವಹಾರಿಕ. ಬ್ರಹ್ಮನು ಅದ್ವೈತ ಮತ್ತು ಬಂಧರಹಿತ ಎಂಬುದೇ ಪರಮಸತ್ಯ. ಅದು ಒಂದೇ ಇರುವುದು. ಅದಲ್ಲದೆ ಬೇರಾವುದೂ ಇಲ್ಲ. ಆದರೆ ಲೌಕಿಕವಾದ ಸಾಪೇಕ್ಷವಾದ ನಮ್ಮ ದೃಷ್ಟಿಯಲ್ಲಿ ಬ್ರಹ್ಮನು ದೇವರಾಗಿ ಜಗತ್ಕಾರಣನಾಗಿ ಕಾಣುತ್ತಾನೆ. ಈ ಜಗತ್ತು ಬ್ರಹ್ಮನಲ್ಲಿರುವ ಒಂದು ಭ್ರಮೆ. ಹಗ್ಗದಲ್ಲಿ ಹಾವಿರುವಂತೆ, ನಿಜವಾಗಿಯೂ ಕಾರ್ಯಕಾರಣ ಸಂಬಂಧವೂ ಇಲ್ಲ. ಈ ವಾದಕ್ಕೆ ವಿವರ್ತವಾದ ಎಂದುಹೆಸರು. ಪರಿಣಾಮವಾದದಿಂದ ಇದು ಬೇರೆಂಬುದನ್ನು ತಿಳಿಯಬೇಕು.

ನಿರುಪಾಧಿಕವಾದ ಪರಮಸತ್ಯವನ್ನೇ ಐಹಿಕವಾದ ಜಗತ್ತು ಮತ್ತು ವ್ಯಕ್ತಿಗಳ ಸಂಬಂಧದಲ್ಲಿ ನಿರೀಕ್ಷಿಸಿ ದೇವರು ಎಂದು ಕರೆಯುತ್ತಾರೆ. ನಿರ್ಗುಣನಾಗಲಿ ಸಗುಣನಾಗಲಿ ಬ್ರಹ್ಮನು ಒಂದೇ. ಕೆಲವು ವಿಮರ್ಶಕರು ತಪ್ಪಾಗಿ ತಿಳಿಸುವಂತೆ ಎರಡು ಬೇರೆಬೇರೆ ಬ್ರಹ್ಮರಿಲ್ಲ. ದೇವರನ್ನು ಅಪರಬ್ರಹ್ಮವೆಂದು ಹೇಳಿದಾಗಲೂ, ಬ್ರಹ್ಮನು ದೇವತ್ವವೆಂಬ ಕೆಳಮಟ್ಟಕ್ಕೆ ಇಳಿದಿದ್ದಾನೆಂದು ಅರ್ಥವಲ್ಲ; ಸಾಕ್ಷೇಪಾನುಭವದ ಕೆಳಮಟ್ಟದಿಂದ ನಾವು ಕಾಣುವ ಬ್ರಹ್ಮನೆಂದೇ ಅರ್ಥ. ಇವು ಬ್ರಹ್ಮನ ದ್ವಿರೂಪಗಳೇ ಹೊರತು ಎರಡು ಬೇರೆಬೇರೆ ಬ್ರಹ್ಮಗಳಲ್ಲ. ಸಸ್ವರೂಪಬ್ರಹ್ಮ ಮತ್ತು ಸಾಪೇಕ್ಷಬ್ರಹ್ಮ. ಮೊದಲನೆಯದು ನಿರುಪಾಧಿಕಬ್ರಹ್ಮ, ಎರಡನೆಯದು ನಾಮರೂಪ ವ್ಯತ್ಯಾಸಗಳಿಂದ ಉಪಾಧಿಗೊಳಗಾದ ಬ್ರಹ್ಮ.

ದೇವರೆಂಬುದು ಹೀಗೆ ಉಪಾಧಿಗೊಳಗಾದ ಬ್ರಹ್ಮ. ಉಪಾಧಿಯನ್ನುಂಟುಮಾಡುವ ನಿಯಮಕ್ಕೆ 'ಮಾಯೆ' ಎಂದು ಹೆಸರು. ಮಾಯೆಯು ಬ್ರಹ್ಮನಿಂದ ಬೇರೆಯಾದ ಸದ್ವಸ್ತುವಲ್ಲ. ಅದು ಯಾವ ಗುಣದ ಆರೋಪಣೆ ಮಾಡುವುದಕ್ಕೂ ಬರುವುದಿಲ್ಲ. ನಿಜವಾದ ದ್ವೈತವಲ್ಲದ, ಆರೋಪಿತ ದ್ವೈತವೆನ್ನುವುದು ದೇವತ್ವದ ಅಸ್ತಿತ್ವಕ್ಕೆ ಅಗತ್ಯವಾದುದು ಅಷ್ಟೆ! ಆಕಾಶವನ್ನು ಕುರಿತು ಮಾತನಾಡುವಾಗ ಬಹಿರಂಗದ ಆಕಾಶದೊಳಗಣ ಆಕಾಶ ಎಂದು ಮಾತನಾಡಿದರೂ ಆಕಾಶಕ್ಕೆ ಸಂಬಂಧಿಸಿದಂತೆ ಯಾವ ವ್ಯತ್ಯಾಸವಿಲ್ಲ. ಹೀಗೆಯೇ ದೇವರಿಗೆ ಸರ್ವಜ್ಞತೆಯೂ ಸರ್ವಶಕ್ತಿಯೂ ಇವೇ ಮುಂತಾದ ಇತರ ಗುಣಗಳು ಇವೆಯೆಂದೂ ಅಲ್ಪಜ್ಞತೆ ಮತ್ತು ಅಲ್ಪಶಕ್ತಿಯಿರುವ ಜೀವಾತ್ಮದಿಂದ ಅದು ಬೇರೆಯೆಂದೂ ಹೇಳುತ್ತಾರೆ. ದೇವತ್ವಕ್ಕೆ

ಯಾವ ವ್ಯತ್ಯಾಸಗಳೂ ಇಲ್ಲ; ಅದನ್ನು ಉಪಾಧಿಗೊಳಗುಮಾಡಲಾಗುವುದಿಲ್ಲ. ಪ್ರತಿಬಿಂಬವಾದದ ಒಂದು ಪ್ರತಿಪಾದನೆಯಂತೆ ಈಶ್ವರನು ಮಾಯೆಯಲ್ಲಿ ಕಾಣುವ ಬ್ರಹ್ಮನ ಪ್ರತಿಬಿಂಬವೆಂದು ವರ್ಣಿತವಾಗಿದೆಯೆಂದು ನಾವು ಒಪ್ಪಿಕೊಳ್ಳಬೇಕು. ಆದರ ಈ ದೃಷ್ಟಿಯಲ್ಲಿ ಪ್ರತಿಬಿಂಬವು ಬಿಂಬಸಮಾನವಾಗಿರುತ್ತದೆಂಬುದನ್ನು ನೆನಪಿಡಬೇಕು. ಹೆಚ್ಚು ಜಾನದರಣೀಯವಾಗಿರುವ, ಪ್ರತಿಬಿಂಬವಾದದ ಮತ್ತೊಂದು ಪ್ರತಿಪಾದನೆಯಂತೆ ಈಶ್ವರನ ಮೂಲಬಿಂಬದ ಮುಖಕ್ಕೂ ಜೀವಾತ್ಮಗಳನ್ನು ಮಾತ್ರ ಕನ್ನಡಿಗಳೊಳಗಿನ ಪ್ರತಿಬಿಂಬ ಮುಖಕ್ಕೂ ಹೋಲಿಸುತ್ತಾರೆ. ಹೇಗೇ ಆದರೂ ಅದ್ವೈತದ ಪ್ರಕಾರ ಈಶ್ವರನು ಭೂತಸೃಷ್ಟಿಯೂ ಅಲ್ಲ, ವ್ಯಕ್ತಿಬುದ್ಧಿಯಿಂದ ನಿರ್ಮಿತವಾದ ಧ್ಯೇಯಸೃಷ್ಟಿಯೂ ಅಲ್ಲ. ಈಶ್ವರಭಾವನೆಯನ್ನು ಅಸಂಬದ್ಧವಾದ ಆಧಾರವೆಂದು ಅಸಾಧ್ಯವಾದ, ಅಸಂಗತವಾದ ಭಾವನೆಯೆಂದು ತಳ್ಳಿಬಿಡುವಹಾಗಿಲ್ಲ. ಅದ್ವೈತವಾದದಲ್ಲಿ ಈಶ್ವರನ ಸ್ಥಾನವು ಹಾನಿಕಾರಕವೂ ಅಲ್ಲ ಅಪಾಯಕಾರಿಯೂ ಅಲ್ಲ. ಅದಕ್ಕೆ ವಿರೋಧವಾಗಿ ಅದ್ವೈತಾನುಭವಕ್ಕೆ ಆ ಭಾವನೆ ಸುಸಂಬದ್ಧವಾಗಿದೆ ಮತ್ತು ಅದು ಸಂಪನ್ನಭಾವವಾಗಿದೆ.

ಜೀವಾತ್ಮವೂ ಪರಮಾತ್ಮವೂ ಒಂದೇ ಆದರೆ ಅದ್ವೈತದಲ್ಲಿ ಪರಮಾತ್ಮನಿಗೆ ಸ್ಥಾನವೆಲ್ಲಿ? ಎಂದು ಕೇಳಬಹುದು. ಉತ್ತರವು ಸರಳವಾಗಿದೆ. 'ತತ್ವಮಸಿ' 'ಅಹಂ ಬ್ರಹ್ಮಾಸ್ಮಿ' ಮುಂತಾದ ಒಂದೇ ಅರ್ಥದ ವಾಕ್ಯಗಳಲ್ಲಿ ಕೂಡ ಪರಮಾತ್ಮ ಜೀವಾತ್ಮಗಳ ತಾದಾತ್ಮ್ಯವನ್ನು ಬೋಧಿಸುತ್ತಿಲ್ಲ. ಈ ವಾಕ್ಯಗಳಲ್ಲಿಯ ಜೀವಾತ್ಮ ಪರಮಾತ್ಮ ಎಂಬ ಪದಗಳಲ್ಲಿ ತಾದಾತ್ಮ್ಯವಿಲ್ಲದಿರುವುದರಿಂದಲೇ ಅವುಗಳ ಬೇರೆ ಅರ್ಥಕ್ಕೆ ನಾವು ಮೊರೆಹೋಗಬೇಕಾಯಿತು. ಜೀವಾತ್ಮ ಪರಮಾತ್ಮ ಎಂಬುದು ಒಂದೇ ಎಂದು ಈ ವಾಕ್ಯಗಳು ಬೋಧಿಸುವುದಿಲ್ಲ. (ಆದರೆ ಈ ಪದಗಳ ಎರಡನೆಯ ಅರ್ಥವನ್ನು ಅಂದರೆ ನಿರುಪಾಧಿಕವಾದ ಆತ್ಮ ಒಂದೇ ಎಂದು ಬೋಧಿಸುತ್ತವೆ.) ಅದ್ವೈತವು ನಮಗೆ ಆತ್ಮವೇ ಬ್ರಹ್ಮ ಎಂದು ಹೇಳುತ್ತದೆಯೇ ಹೊರತು ಜೀವಾತ್ಮವೇ ಈಶ್ವರನೆಂದಲ್ಲ. ಸುಷುಪ್ತಿಯಲ್ಲಿ ಮುಳುಗಿರುವ ಆತ್ಮವನ್ನು ಕುರಿತು ಮಾಂಡೂಕ್ಯ ಉಪನಿಷತ್ತಿನಲ್ಲಿ ಈ ವಾಕ್ಯಗಳಿವೆ: "ಇದು ಎಲ್ಲದರ ಒಡೆಯ" ಇದು ಸರ್ವಜ್ಞ, ಇದು ಎಲ್ಲದರ ಅಂತರಂಗದ ರಾಜ. ಇದು ಎಲ್ಲದರ ಮೂಲ, ಎಲ್ಲ ಜೀವಗಳ ಗೋತ್ರ ಮತ್ತು ಅಂತ್ಯ." ಅನುಭವವಾದಿಯಾದ ಜೀವವೂ ಈಶ್ವರನು ಒಂದೇ ಎಂದು ಹೇಳುವುದು ಈ ಮಾತುಗಳ ಅರ್ಥವಲ್ಲ. ಇದು ಪ್ರಜ್ಞೆಯನ್ನು ಕುರಿತ ಸ್ತುತಿ ಎಂದು ತಿಳಿಯಬೇಕು. ಅದು ಯಾವ ದ್ವೈತಭಾವವೂ ಇಲ್ಲದೆ ಸುಷುಪ್ತಿಯಲ್ಲಿರುವ ಆತ್ಮಸ್ಥಿತಿ. ಜೀವಾತ್ಮ ವಿಶ್ವಾತ್ಮಗಳ ನಡುವಿನ ಸಂಬಂಧವನ್ನು ಈ ವಾಕ್ಯಗಳು ಸೂಚಿಸುತ್ತಿವೆ ಎಂದು ಬೇಕಾದರೂ ತಿಳಿದುಕೊಳ್ಳಬಹುದು. ಮುಮುಕ್ಷುವು ಇಷ್ಟದೇವತೆಯಲ್ಲಿ ತಾದತ್ಮ್ಯಯ ಹೊಂದಿ ಮಾಡುವ ಕೆಲವು ಧ್ಯಾನದ ಕ್ರಮಗಳಿವೆ. ಧ್ಯಾನವು ಏರಬಹುದಾದ ಅತಿ ಎತ್ತರದ

ಮೆಟ್ಟಿಲು 'ನಾನೇ ಬ್ರಹ್ಮ', 'ಅಹಂ ಬ್ರಹ್ಮಾಸ್ಮಿ' ಎಂದು ಭಾವಿಸಿಕೊಳ್ಳುವುದು. ಆದರೆ ಈ ಸಂದರ್ಭದಲ್ಲಿ ಬೇಕಾಗಿರುವುದೇನೆಂದರೆ ಸ್ವೀಕರಿಸಿದ ತಾದಾತ್ಮ್ಯ, ನಿಜವಾದ ತಾದಾತ್ಮ್ಯವಲ್ಲ. ಜೀವಾತ್ಮ ಪರಮಾತ್ಮಗಳ ಬಗ್ಗೆ ಮಾತನಾಡಬೇಕಾದಾಗ, ವ್ಯವಹರಿಸಬೇಕಾದಾಗ ಎರಡರ ನಡುವಣ ವ್ಯತ್ಯಾಸವನ್ನು ಗುರುತಿಸಬೇಕಾಗುತ್ತದೆ. ಅದ್ವೈತವು ಈ ವ್ಯತ್ಯಾಸವನ್ನು ನಿರ್ಮೂಲಗೊಳಿಸಲು ಪ್ರಯತ್ನಿಸುವುದಿಲ್ಲ. ಪರಮಾತ್ಮನನ್ನು ಸಮುದ್ರಕ್ಕೆ ಹೋಲಿಸಿದರೆ, ಜೀವಾತ್ಮನನ್ನು ಅಲೆಗಳಿಗೆ ಹೋಲಿಸಿದರೆ, ಆಗ ಜೀವಾತ್ಮವು ಪರಮಾತ್ಮನ ಒಂದು ಗುಣವೆಂದು ಹೇಳುವುದು ಸರಿಯೇ ಹೊರತು, ಪರಮಾತ್ಮನು ಜೀವಾತ್ಮದ ಒಂದು ಗುಣವೆಂದು ಹೇಳಲಾಗುವುದಿಲ್ಲ. ತೆರೆಗಳು ಸಮುದ್ರಕ್ಕೆ ಸೇರಿದುವೇ ಹೊರತು ಸಮುದ್ರವು ತೆರೆಗಳಿಗೆ ಸೇರಿದ್ದಲ್ಲ ಎಂಬಂತೆ ಭಕ್ತಿಗೋಸ್ಕರವಾಗಿ ಕಲ್ಪಿತವಾಗಿರುವ ದ್ವೈತವು ಅದ್ವೈತಕ್ಕಿಂತ ಸುಂದರವಾಗಿದೆ. (ಭಕ್ತ್ಯರ್ಥಂ ಕಲ್ಪಿತಂ ದ್ವೈತಂ ಅದ್ವೈತಾದತಿ ಸುಂದರಂ.)

ಅದ್ವೈತದ ಪ್ರಕಾರ ಈಶ್ವರನ ಅಥವಾ ಪರಮಾತ್ಮನ ಸ್ಥಾನವನ್ನು ಸ್ವಯಂಸಿದ್ಧತ್ವದ ದೃಷ್ಟಿಯಿಂದಲೂ ಭೌತಾತೀತ ದೃಷ್ಟಿಯಿಂದಲೂ ಅರ್ಥಮಾಡಿಕೊಳ್ಳಬಹುದು. ಪರಮಾತ್ಮನನ್ನು ವಿಶ್ವದ ಮೂಲವೆಂದೂ ಧ್ಯಾನಗಮ್ಯವೆಂದೂ ತಿಳಿಯಬೇಕು. ವಿಶ್ವಕ್ಕೆ ಸಂಬಂಧಿಸಿದಂತೆ ಪರಮಾತ್ಮನು ಎಲ್ಲ ಜೀವದ ಮೂಲ; ಜೀವಾತ್ಮಕ್ಕೆ ಸಂಬಂಧಿಸಿದಂತೆ ಪರಮಮೌಲ್ಯ.

ಜಗತ್ಸೃಷ್ಟಿಯ ಅನೇಕ ಕಾರಣಗಳಲ್ಲಿ ಪರಮಾತ್ಮನು ಒಂದು ಕಾರಣವಲ್ಲ; ಅವನೇ ಏಕಮೇವವೂ ಸಂಪೂರ್ಣವೂ ಆದ ಕಾರಣ. ಪರಮಾತ್ಮನು ವಿಶ್ವದ ಮೂಲ ಆಧಾರವಸ್ತುವೂ ಸಂಪೂರ್ಣ ಕಾರಣನೂ ಆಗಿದ್ದಾನೆ. ಕಾರ್ಯಕಾರಣಭಾವವು ಕಾಲಭಾವದೊಡನೆ ಸಂಬಂಧ ಹೊಂದಿರುವುದರಿಂದ ಪರಮಾತ್ಮನನ್ನು ಎಲ್ಲ ವಸ್ತುಗಳ ಪರಮ ಆಧಾರವೆಂದು ತಿಳಿಯುವುದೇ ಲೇಸು. ದೇವತ್ವ ಅಥವಾ ಬ್ರಹ್ಮವೆನ್ನುವುದು ಎಲ್ಲ ಜೀವಗಳು ಉತ್ಪತ್ತಿಯಾಗುವ ಸ್ಥಾನ, ಉತ್ಪತ್ತಿಯಾದಮೇಲೆ ವಾಸಿಸುವ ಸ್ಥಾನ, ಕೊನೆಗೆ ಎಲ್ಲವೂ ಅಂತರ್ಧಾನವಾಗುವ ಸ್ಥಾನ. ವಿಶ್ವವು ನಾಮರೂಪಗಳಿಂದ ಬೇರೆ ಬೇರೆಯಾಗಿ ಗ್ರಹಿಸಲ್ಪಡುತ್ತದೆ. ಅದರಲ್ಲಿ ಅನೇಕ ಕರ್ತರೂ ಭೋಕ್ತರೂ ಇದ್ದಾರೆ. ಅದರ ಅಂಗಗಳು ಕಾಲ ದೇಶ ಕಾರಣ ಕರ್ಮಫಲಗಳಿಂದ ನಿಯಮಿಸಲ್ಪಟ್ಟಿವೆ. ಇಲ್ಲಿ ಕಾಣುವ ಈ ವ್ಯವಸ್ಥೆಯನ್ನು ಅರಿಯುವುದು ಮನಸ್ಸಿಗೆ ಸಾಧ್ಯವಿಲ್ಲ. ಇಂಥ ವಿಶಿಷ್ಟವಾಗಿ ಕ್ರಮಬದ್ಧವಾದ ವರ್ಣರಂಜಿತವಾದ ವಿಶ್ವಸೃಷ್ಟಿಯ ಕಾರಣವಾಗಿ ಸರ್ವಜ್ಞನೂ, ಸರ್ವಶಕ್ತನೂ ಆದ ಪರಮಾತ್ಮನನ್ನು ಬಿಟ್ಟು ಬೇರಾವ ಮೂಲಕಾರಣವನ್ನು ಅಥವಾ ಆಧಾರವನ್ನು ನಿರೂಪಿಸುವುದೂ ಸಾಧ್ಯವಿಲ್ಲ. ಇದೂ, ಇಂಥ ಇತರ ವಾದಗಳೂ ಪರಮಾತ್ಮನ ಅಸ್ತಿತ್ವವನ್ನು ಸಾಧಿಸಲು ನೀಡುವ ವಾದಗಳೆಂದು ತಿಳಿಯಬಾರದು. ಪರಮಾತ್ಮನು ತಾರ್ಕಿಕವಾದದ ಅಂತ್ಯ ಪರಿಣಾಮವಲ್ಲ. ಸ್ವೋಪಜ್ಞತೆಯಿಂದ ಕಾಣಬಲ್ಲ ವೇದೋಪನಿಷತ್ತುಗಳಲ್ಲಿ

ಘೋಷಿತವಾಗಿರುವ ಪರಮಾತ್ಮ ತತ್ವವನ್ನು ಅರ್ಥಮಾಡಿಕೊಳ್ಳಲು ಈ ವಾದಗಳು ಸಹಾಯ ಮಾಡಬಹುದಷ್ಟೆ.

ಪರಮಾತ್ಮನು ವಿಶ್ವಕ್ಕೆ ಆಧಾರ ಮಾತ್ರವಲ್ಲ; ಅದರ ನೀತಿಪಾಲಕನೂ ಹೌದು. ನೈತಿಕಪರಿಧಿಯಲ್ಲಿ ಕ್ರಿಯಾಮುಖವಾಗಿರುವ ಕರ್ಮಸೂತ್ರಕ್ಕೆ ಪರಮಾತ್ಮನೇ ಮಾರ್ಗದರ್ಶಿ. ಜೀವಾತ್ಮಗಳು ಪುಣ್ಯಕಾರ್ಯಕ್ಕೆ ಪುಣ್ಯವನ್ನೂ ಪಾಪಕ್ಕೆ ಪಾಪವನ್ನೂ ಅನುಭವಿಸಿದರೆ ಅದಕ್ಕೆ ಕಾರಣ ಪರಮಾತ್ಮನು ಕರ್ಮಸೂತ್ರದ ರೂಪದಲ್ಲಿ ಹೇಳಿರುವ ವಿಧಿಗಳೇ. ಕರ್ಮವು ತಾನೇ ಕ್ರಿಯಾಮುಖವಾಗಿರಬಲ್ಲದು. ಕ್ರಿಯಾಮುಖವಾಗಿರುತ್ತದೆ ಎಂಬ ಮೀಮಾಂಸಕರ ವಾದಕ್ಕೆ ವೇದಾಂತಿಗಳು ಹೀಗೆ ಹೇಳುತ್ತಾರೆ: ಕರ್ಮವು ಜಡವಾದುದರಿಂದ ಅದನ್ನು ಕ್ರಿಯಾಮುಖಮಾಡಲು ಒಬ್ಬ ಬುದ್ಧಿವಂತನಾದ ನಿರ್ವಾಹಕನ ಅವಶ್ಯಕತೆಯಿದೆ. ಮಿತಿಗೊಳಗಾದಾಗ ಬುದ್ಧಿವಂತ ಜೀವ ಯಾವುದೂ ಕರ್ಮವನ್ನು ಅಧೀನಗೊಳಿಸಿಕೊಳ್ಳಲಾಗುವುದಿಲ್ಲ. ನಿಜವಾಗಿ ಹೇಳುವುದಾದರೆ ಜೀವಾತ್ಮಗಳೇ ಕರ್ಮದ ಆಕ್ರಮಣಕ್ಕೆ ಒಳಗಾಗಿರುವುವು. ಅಂದರೆ ಜೀವಾತ್ಮಗಳು ಕರ್ಮದ ಆಟಿಕೆಗಳೆಂದು ಭಾವಿಸಬಾರದು. ಪ್ರತಿ ಜೀವಾತ್ಮವು ತನ್ನ ತನ್ನ ಕರ್ಮದ ಫಲವನ್ನು ತಕ್ಕಂತೆ ಪಡೆದಿರುತ್ತದೆ. ಯೋಗ್ಯತೆಯನ್ನು ಕರ್ಮದ ಜೊತೆಗೆ ಹೊಂದಿಸುವ ನ್ಯಾಯಸೂತ್ರವೇ ಕರ್ಮ. ಈ ನ್ಯಾಯಮೂರ್ತಿಯೇ ಅಂತರಂಗದ ಶಾಶ್ವತ ಯಜಮಾನ, ಪರಮಾತ್ಮ. ಅವನೇ ನ್ಯಾಯದಾತ ಮತ್ತು ನ್ಯಾಯ. ಅವನು ಜೀವಾತ್ಮಗಳೊಳಗೆ ವಾಸಿಸುತ್ತಿದ್ದು ಅವುಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುತ್ತಾನೆ. ಆತನ ಅಧಿಕಾರದಲ್ಲಿ ಜೀವಾತ್ಮಗಳಿಗೆ ಮೋಕ್ಷವನ್ನುಂಟುಮಾಡುವುದೇ ಅಂತ್ಯೋದ್ದೇಶ. ತನ್ನಿಂದಲೇ ಉತ್ಪತ್ತಿಯಾಗಿರುವ ಈ ವಿಶ್ವವು ಆತ್ಮನಿರ್ಮಾಣಸ್ಥಾನ.

ಮಾನವನು ಅಪೇಕ್ಷಿಸುವ ಇಷ್ಟಗಳು ಅಭ್ಯುದಯ ಮತ್ತು ನಿಶ್ರೇಯಸ್ಸು. ಅಭ್ಯುದಯವು ಇಹದಲ್ಲಾಗಲಿ ಪರದಲ್ಲಾಗಲಿ ನಶ್ವರವಾದುದು. ನಶ್ವರ ಮಾರ್ಗದೊಡನೆ ಇರುವ ಸಂಬಂಧವನ್ನು ಬಿಡಿಸುವುದಾದ ನಿಶ್ರೇಯಸವು ಶಾಶ್ವತವಾದುದು. ಈ ಎರಡರಲ್ಲಿ ಯಾವುದೊಂದನ್ನು ಪಡೆಯಬೇಕಾದರೂ ಪರಮಾತ್ಮನ ಅನುಗ್ರಹಕ್ಕಾಗಿ ಬೇಡುವುದು ಅಗತ್ಯ. ಭಗವದ್ಗೀತೆಯಲ್ಲಿ ನಾಲ್ಕು ವಿಧವಾದ ಭಕ್ತರನ್ನು ಹೇಳಿದೆ: ಆರ್ತರಾದವರು, ಅರ್ಥಾರ್ಥಿಗಳು, ಜಿಜ್ಞಾಸುಗಳು ಮತ್ತು ಜ್ಞಾನಿಗಳು. ಇವುಗಳಲ್ಲಿ ಮೊದಲೆರಡು ವಿಧಕ್ಕೆ ಸೇರಿದವರು ಅಭ್ಯುದಯವನ್ನೇ ಗುರಿಯನ್ನಾಗಿ ಇಟ್ಟುಕೊಂಡಿರುವವರು. ಆರ್ತತೆಯನ್ನು ನಿರ್ಮೂಲಮಾಡಲೂ ಐಶ್ವರ್ಯವನ್ನು ಸಂಪಾದಿಸಲೂ ಪರಮಾತ್ಮನಿಗೆ ಮೊರೆಹಾಕದೆ ಶ್ರಮಿಸುವುದು ಸಾಧ್ಯವೆಂಬುದು ನಿಜ. ಆದರೆ ಈ ಅಪೇಕ್ಷೆಗಳನ್ನು ಪೂರೈಸಲು ದೇವರಿಗೆ ಮೊರೆಹಾಕಿದರೆ ಆಗ ಈ ವಿಷಯದಲ್ಲಿ ದೊರೆತ ಯಶಸ್ಸೇ ಆ ವ್ಯಕ್ತಿಯನ್ನು ಆತ್ಮಜ್ಞಾನಕ್ಕೊಯ್ಯುವ ಉತ್ತಮ ಮಾರ್ಗವನ್ನನುಸರಿಸಲು ಸಿದ್ಧಗೊಳಿಸುತ್ತದೆ.

ಪರಮಾತ್ಮನ ಅನುಗ್ರಹದಿಂದ ಬರುವ ಜ್ಞಾನದಿಂದಲೇ ವ್ಯಕ್ತಿಗೆ ಮೋಕ್ಷ ದೊರೆಯುತ್ತದೆ. (ಶಂಕರ: ಸೂತ್ರ ಭಾಷ್ಯ, II, iii, 41; ತದನುಗ್ರಹಹೇತುಕೇನ್ಯೆವ ವಿಜ್ಞಾನೇನ ಮೋಕ್ಷ ಸಿದ್ಧಿರ್ಭವಿತುಮರ್ಹತಿ.)

ಭಕ್ತನು ಪರಮಾತ್ಮನನ್ನು ಅನೇಕ ರೂಪಗಳಲ್ಲಿ, ಅನೇಕ ಹೆಸರುಗಳಲ್ಲಿ ಪೂಜಿಸುತ್ತಾನೆ. ತನ್ನ ಮಾಯಾಶಕ್ತಿಯಿಂದ ಬೇರೆಬೇರೆ ರೂಪಗಳನ್ನು, ಹೆಸರುಗಳನ್ನು ಆರೋಪಿಸಿಕೊಳ್ಳುವವನು ಆ ಪರಮಾತ್ಮನೇ. ಭಕ್ತರು ಆಚರಿಸುವ ರೂಪವನ್ನು ಧರಿಸಿ ಅವನನ್ನು ಅವರು ಕರೆಯುವ ನಾಮಕ್ಕೆ ಓಗೊಡುತ್ತಾನೆ. ಧರ್ಮಕ್ಕೆ ಗ್ಲಾನಿಯುಂಟಾದಾಗ ಪ್ರಪಂಚವನ್ನು ಉಳಿಸುವುದಕ್ಕಾಗಿ ಪರಮಾತ್ಮನೇ ಅವತರಿಸುತ್ತಾನೆ. ಶರೀರ ರಹಿತನೂ ಅಭವನೂ ಆದರೂ ಆತನು ಹುಟ್ಟುವಂತೆ, ಶರೀರಧಾರಿಯಂತೆ ಕಾಣುತ್ತಾನೆ. ಭಕ್ತರ ಮೇಲೆ ಅನುಗ್ರಹವನ್ನು ಸುರಿಯುವುದಕ್ಕೋಸ್ಕರ ಅವನಿಗಾಗಿ ಮಾಡಿದ ವಿಗ್ರಹಗಳಲ್ಲಿ ದೈವತ್ವವನ್ನು ತುಂಬಿ ಸಜೀವವಾಗಿ ಮಾಡುತ್ತಾನೆ. ದೇವರನ್ನು ಪೂಜಿಸುವ ಅತ್ಯುತ್ತಮ ಮಾರ್ಗವೆಂದರೆ ಅವನನ್ನು ಸರ್ವಾಂತರ್ಯಾಮಿಯೆಂದೂ ಸರ್ವಶಕ್ತನೆಂದೂ ಕಾಣುವುದೇ ಆಗಿದೆ. ಆದರೆ ಬಹು ಜನರಿಗೆ ಅವರು ಮಿತಿಗೊಳಗಾದವರಾದುದರಿಂದ, ಜ್ಞಾನವಿಕಾಸ ಹೊಂದದವರಾದುದರಿಂದ–ಅದು ಅಸಾಧ್ಯವೇ ಆಗದಿದ್ದರೂ ಕಷ್ಟವಾಗುತ್ತದೆ. ಅವರಿಗೋಸ್ಕರವಾಗಿ ಪರಮಾತ್ಮನು ನಿಷ್ಕೃಷ್ಟವಾದ ಸ್ವರೂಪವನ್ನೂ ನಿರ್ಧರವಾದ ನಾಮವನ್ನೂ ಸ್ವೀಕರಿಸುತ್ತಾನೆ. ತುಂಬ ಸಂಕುಚಿತವಾದ ಒರಟಾದ ಪೂಜಾಪದ್ಧತಿಗಳಿಂದ ಭಕ್ತನು ವಿಶಾಲವಾದ ಸಂಸ್ಕೃತವಾದ ಪದ್ಧತಿಗಳ ಕಡೆಗೆ ಪ್ರಗತಿಹೊಂದಬೇಕು. ಈ ಹಂತಗಳನ್ನು ಕೆಳಗಿನ ಶ್ಲೋಕಗದಲ್ಲಿ ಸೂಚಿಸಲಾಗಿದೆ:

ಪ್ರಥಮಾ ಪ್ರತಿಮಾಪೂಜಾ
ಜಪಸ್ತೋತ್ರಾಣಿ ಮಧ್ಯಮಾ
ಉತ್ತಮಾ ಮಾನಸೀಪೂಜಾ
ಸೋಹಂ ಪೂಜೋತ್ತಮೋತ್ತಮಾ

ಪ್ರಥಮ ಹಂತವು ವಿಗ್ರಹಾರಾಧನೆ; ಮುಂದಿನದು ಜಪ ಮತ್ತು ಸ್ತೋತ್ರ ಧ್ಯಾನಗಳಿಂದ ಕೂಡಿರುತ್ತದೆ; ಅದಕ್ಕಿಂತ ಮೇಲಿನದು ಮಾನಸಿಕ ಪೂಜೆ, 'ಸೋಹಂ' ಎಂದು ತಿಳಿಯುವುದೇ ಅತ್ಯುತ್ತಮವಾದ ಪೂಜೆ. 'ಸೋಹಂ' (ನಾನೇ ಅವನು) ಎಂಬ ರೀತಿಯ ಧ್ಯಾನದಿಂದ, ಈ ಜನ್ಮದಲ್ಲಿ ವಿವೇಕ ಉದಯವಾಗದೇಹೋದರೂ ಮುಮುಕ್ಷುವಿಗೆ ಸೃಷ್ಟಿಕರ್ತನಾದ ಬ್ರಹ್ಮನೊಡನೆ ತಾದಾತ್ಮ್ಯವುಂಟಾಗುತ್ತದೆ. ಅಲ್ಲದೆ ಈ ಕಲ್ಪದ ಕೊನೆಯಲ್ಲಿ ಬ್ರಹ್ಮನೊಡನೆ ಮೋಕ್ಷ ಲಭಿಸುತ್ತದೆ.

ಅದ್ವೈತವು ಆಸ್ತಿಕತೆಯ ಮುಂದೆ ಹೋಗುವುದಾದರೂ ಅದು ನಾಸ್ತಿಕವಾದವೆಂದಾಗಲಿ ಆಸ್ತಿಕ್ಯ ವಿರುದ್ಧವೆಂದಾಗಲಿ ತಪ್ಪುತಿಳಿದುಕೊಳ್ಳಬಾರದು. ಪರಮಸತ್ಯವು ನಿರುಪಾಧಿಕವಾದುದು, ಇಷ್ಟದೈವಾತೀತವಾದುದು. ಆದರೆ ಅದು

ವಿಶ್ವದ ಆಧಾರವಾಗಿ ಕಾಣಲು, ಮಾನವನ ಪೂಜೆಗೆ ವಸ್ತುವಾಗಿರಲು ಇಷ್ಟದೈವವಾಗಿ ಕಾಣುತ್ತದೆ. ಬ್ರಹ್ಮನು ಈಶ್ವರನಾಗಿ ಕೆಳಮಟ್ಟಕ್ಕೆ ಇಳಿಯುತ್ತಾನೆಂದು ಅರ್ಥವಲ್ಲ. ಅದಕ್ಕೆ ವಿರೋಧವಾಗಿ ಸಂಪೂರ್ಣಾನುಭವದಿಂದ ಈಶ್ವರನೂ ಬ್ರಹ್ಮನೆಂದು ಅರಿಯುವುದಕ್ಕಾಗಿ. ಪರತತ್ವವು ಈಶ್ವರನ ರೂಪದಲ್ಲಿ ವಿಶ್ವದ ಆಧಾರಸ್ತಂಭವಾಗುತ್ತದೆ; ಆತ್ಮದ ಸಂಪೂರ್ಣತೆಯ ದೃಷ್ಟಾಂತವಾಗುತ್ತದೆ.

ಈಶ್ವರನಿಂದ ಬೇರೆಯಾಗಿ ಈ ಪ್ರಪಂಚವು ಇರುವಂತೆ ಕಾಣುವ ಸ್ಥಿತಿಗೆ ಕಾರಣ 'ಮಾಯೆ'. ಮಾಯೆಗೆ ಪರತತ್ವದ ಸಂಬಂಧದಲ್ಲಿ ಯಾವ ಪ್ರಾಧಾನ್ಯವೂ ಇಲ್ಲ; ಆದರೆ ಸಾಪೇಕ್ಷದೃಷ್ಟಿಯಿಂದ ಅದಕ್ಕೆ ಅರ್ಥವಿದೆ. 'ಇಲ್ಲದಿರುವುದೇ ಮಾಯೆ' ಎಂಬುದೇ ಪರಮಸತ್ಯ. (ಯಾ–ಯಾವುದು, ಮಾ–ಇಲ್ಲವೋ ಅದು.) ನಮ್ಮ ದೃಷ್ಟಿಯಿಂದ ಹೇಳುವುದಾದರೆ ಮಾಯೆಯು ಪರಮಾತ್ಮನ ದುರ್ಭೇಧ್ಯವಾದ ಶಕ್ತಿಯಾಗಿ ಕಾಣುತ್ತದೆ; ಅದು ಸತ್ಯವನ್ನು ಮುಚ್ಚಿ ಅಸತ್ಯವನ್ನು ಮುಂದೆ ಒಡ್ಡುತ್ತದೆ. ಹೀಗೆ ಮುಚ್ಚುವ ಶಕ್ತಿಯನ್ನು 'ಆವರಣ' ಎಂದೂ, ಮುಂದೆ ಒಡ್ಡುವುದನ್ನು 'ವಿಕ್ಷೇಪ'ಎಂದೂ ಕರೆಯುತ್ತಾರೆ. 'ಮಾಯೆ'ಯು ಸತ್ಯವೋ ಅಲ್ಲವೋ? ಎಂದು ಪ್ರಶ್ನಿಸಿದರೆ ಇರುವುದು ಒಂದೇ ಉತ್ತರ: ಅದುಸತ್ಯವೂ ಅಲ್ಲ ಅಸತ್ಯವೂ ಅಲ್ಲ. ವೈವಿಧ್ಯಮಯವಾದ ಪ್ರಪಂಚವು ಕಾಣುವುದರಿಂದ 'ಮಾಯೆ'ಯು ಅಸತ್ಯವಲ್ಲ; ಅದ್ವೈತವಾದ ಆತ್ಮಜ್ಞಾನದಿಂದ 'ಮಾಯೆ'ಯು ನಾಶವಾಗುವುದರಿಂದ ಅದು ಸತ್ಯವಲ್ಲ. ಅದು ಸತ್ಯವೂ ಅಲ್ಲದೆ ಅಸತ್ಯವೂ ಅಲ್ಲದೆ ಇರುವುದು ಸಾಧ್ಯವಿಲ್ಲ. ಆದುದರಿಂದ ಅದು ಅನಿರ್ವಚನೀಯ. 'ಮಾಯೆ'ಯ ಪರಿಶೀಲನೆಯಿಂದ ಆ ಭಾವನೆಯು ಸ್ಪಷ್ಟವಾಗುವುದಿಲ್ಲ; ಆದರೆ ಮಾಯೆಯ ಆವರಣದಿಂದ ಪಾರಾಗಲು ಸಹಾಯಕವಾಗುತ್ತದೆ. ಆವರಣವನ್ನು ದಾಟಿಹೋದಮೇಲೆ ಪರಿಹಾರವನ್ನು ನಿರೀಕ್ಷಿಸುವ ಯಾವ ಸಮಸ್ಯೆಯೂ ಉಳಿಯುವುದಿಲ್ಲ.

ಮಾಯೆಯನ್ನು ಮೀರಲು ಅಪೇಕ್ಷೆಪಡುವವರು ಯಾರು? ಅದೇ ಜೀವ. ಈ ಜೀವವು ಪರಮಾರ್ಥದಲ್ಲಿ ಬ್ರಹ್ಮವೇ. ಮಾಯೆಯ ವ್ಯಕ್ತಿಪರ ಸ್ವರೂಪವಾದ 'ಅವಿದ್ಯೆ'ಯಿಂದ ಈ ಜೀವವು ಮನೋಶರೀರ ಸಂಬಂಧಿಯಾದ ಪ್ರಾಣಿಯಾಗಿ ತನ್ನನ್ನು ತಿಳಿದುಕೊಂಡು, ಸಂಸಾರಪಥದಲ್ಲಿ ಸಿಕ್ಕಿಹಾಕಿಕೊಳ್ಳುತ್ತದೆ. ಜೀವಾತ್ಮವನ್ನು ಆವರಣದೊಳಗಿಡುವ ದೇಹ, ಪ್ರಾಣ, ಮನಸ್ಸು ಎಂಬ ಕೋಶಗಳು ಮಾಯೆಯ ಉತ್ಪನ್ನಗಳು. ತತ್ಪರಿಣಾಮವಾಗಿ ಇವುಗಳೇ ಆತ್ಮವೆಂಬ ಭ್ರಮೆಗೆ ಒಳಗಾಗುತ್ತಾರೆ. ಅವುಗಳ ಸ್ವಭಾವಗಳನ್ನು ತಪ್ಪಾಗಿ ಶಾಶ್ವತವಾದ ಆತ್ಮಕ್ಕೆ ಅಂಟಿಸುತ್ತಾರೆ. ಇವುಗಳಿಂದಲೂ ಪ್ರಪಂಚದ ವಿವಿಧ ವಸ್ತುಗಳಿಂದಲೂ ಉಪಾಧಿಗೊಳಗಾಗಿ, ಏಕಸತ್ಯವಾದ ಪರಮಾತ್ಮವು ಸೀಮಿತವಾದಂತೆ, ಅನೇಕವಾದಂತೆ, ಹುಟ್ಟುಸಾವುಗಳಿಗೊಳಗಾದಂತೆ, ಕ್ರಿಯೆಯಲ್ಲಿ ಅನುಭವದಲ್ಲಿ ಭಾಗಿಯಾಗಿರುವಂತೆ ಕಾಣಬರುತ್ತದೆ. ಇವೆಲ್ಲ ಅಭಿಪ್ರಾಯಗಳೂ ಅಜ್ಞಾನದ ಫಲ. ಆತ್ಮಕ್ಕೆ ದೇಹಾಂತರ ಪ್ರಾಪ್ತಿಯುಂಟೆಂದೂ

ಅದು ನಡೆಯುವ ಈ ಪ್ರಪಂಚವೇ ಸತ್ಯವೆಂದೂ ತಪ್ಪಾಗಿ ಕಲ್ಪಿಸುತ್ತೇವೆ. ಈ ರೋಗಕ್ಕಿರುವ ಮದ್ದು ಒಂದೇ-ನಿಜವಾದ ಜ್ಞಾನ. ಆತ್ಮವು ಉದಯಿಸುವುದೂ ಇಲ್ಲ, ಅವಸಾನ ಹೊಂದುವುದೂ ಇಲ್ಲ; ಅದು ಸ್ವಪ್ರಕಾಶಮಾನವಾದ ಅರಿವು. ಆತ್ಮವನ್ನು ಅನುಭವವೆನ್ನಿಸುವ ಮಿಥ್ಯೆಯಾದ ವಿಷಯೋಪಾಧಿಗಳು ನಿಜವಾದ ಜ್ಞಾನದಿಂದ ನಿರ್ಮೂಲಗೊಂಡಾಗ ಆತ್ಮವು ತನ್ನ ನಿಜಸ್ವಭಾವದಲ್ಲಿ 'ಆತ್ಮ'ವೆಂದು ಗ್ರಹಿಸಲ್ಪಡುತ್ತದೆ.[1] ಅದ್ವೈತಾತ್ಮವು ಶಾಶ್ವತವಾದುದು ಮತ್ತು ವೈವಿಧ್ಯಮಯವಾದ ವಿಶ್ವದ ಆಧಾರ. ವಿಶ್ವವು ಮಾಯೆಯ ಒಂದು ದೃಶ್ಯ. ಮಾಯೆಯ ಉದಾತ್ತೀಕರಣದಿಂದ ಭ್ರಮೆಯನ್ನು ನಾಶಮಾಡಿ ನಿಜವಾದ ಆತ್ಮವನ್ನು ಅರಿಯಬಹುದು. ಆತ್ಮಜ್ಞಾನವೇ ಮೋಕ್ಷ.

ಆದುದರಿಂದ ಅದ್ವೈತವಾದದಂತೆ ಆತ್ಮವು ಸೃಷ್ಟಿಯಾದುದಲ್ಲವೆಂಬುದು ಸ್ಪಷ್ಟ. ದೇಹ ಮತ್ತು ಮನಸ್ಸುಗಳೆಂಬ ಇಹಲೋಕ ಸಂಬಂಧಿಯಾದ ಹೊರಗಿನ ಆವರಣ ಮಾತ್ರ ಸೃಷ್ಟಿಯಾಗಿದೆ. ಈ ಶರೀರ ಮತ್ತು ಮನಸ್ಸಿನ ಸಂಕೀರ್ಣ ಸ್ಥಿತಿ ಮತ್ತು ಅದಕ್ಕೆ ಕಾರಣವಾದ ಅವಿದ್ಯೆ-ಇವು ಆತ್ಮದ ಸಂಸಾರವಾಗಿ ಕಾಣಬರುತ್ತಿವೆ. ಅವಿದ್ಯೆಯೇ ಆತ್ಮದ ಕಾರಣಶರೀರ. ಕಾರಣಶರೀರವನ್ನೇ ಆನಂದಮಯಕೋಶ ಎನ್ನುತ್ತಾರೆ. ಸೂಕ್ಷ್ಮಶರೀರದಲ್ಲಿ ಮೂರು ಕೋಶಗಳಿವೆ: ವಿಜ್ಞಾನಮಯ ಕೋಶ, ಮನೋಮಯ ಕೋಶ ಮತ್ತು ಪ್ರಾಣಮಯ ಕೋಶ. ಸ್ಥೂಲಶರೀರವು ಅನ್ನಮಯ ಕೋಶ. ಸಾವು ಬಂದಾಗ ಏನಾಗುತ್ತದೆಂದರೆ ಸ್ಥೂಲಶರೀರವು ವ್ಯತ್ಯಾಸವಾಗುತ್ತದೆ. ಇದನ್ನು ಭಗವದ್ಗೀತೆಯು ಬಟ್ಟೆಯ ಬದಲಾವಣೆಗೆ ಹೋಲಿಸುತ್ತದೆ. ಮನುಷ್ಯನು ಹಳೆಯ ಬಟ್ಟೆಗಳನ್ನು ಬಿಸುಟು ಹೊಸ ಬಟ್ಟೆಗಳನ್ನು ಧರಿಸುವಂತೆ, ಆತ್ಮವು ಜೀರ್ಣವಾದಶರೀರವನ್ನು ತ್ಯಜಿಸಿ ನವದೇಹಗಳನ್ನು ಪಡೆಯುತ್ತದೆ. ಕಾರಣಶರೀರವೂ ಸೂಕ್ಷ್ಮಶರೀರವೂ ಮಾತ್ರ ಅಗತ್ಯವಾದ ವ್ಯತ್ಯಾಸಗಳನ್ನು ಹೊಂದಿ ಮೋಕ್ಷ ಸಿಗುವ ತನಕ ಮುಂದುವರಿಯುತ್ತಲೇ ಇರುತ್ತವೆ.

ಮಾನವನ ಅನುಭವವನ್ನು ಮೂರು ಅವಸ್ಥೆಗಳಿಂದ ಬೇರೆ ಮಾಡಬಹುದು. ಜಾಗ್ರತಾವಸ್ಥೆ, ಸ್ವಪ್ನಾವಸ್ಥೆ ಮತ್ತು ಸುಷುಪ್ತ್ಯವಸ್ಥೆ. ಜಾಗ್ರತ್ ಸ್ಥಿತಿಯಲ್ಲಿ ವಿವಿಧ ವಿಷಯಗಳ ಹೊರಲೋಕವನ್ನು ಮಾನವನು ಅನುಭವಿಸುತ್ತಾನೆ. ಸ್ವಪ್ನಸ್ಥತಿಯಲ್ಲಿ ಅವನು ಅಂತರಂಗದ ಪ್ರತಿಮೆಗಳ ಲೋಕವೊಂದನ್ನು ಸೃಷ್ಟಿಸಿಕೊಂಡು ಅದರಲ್ಲಿ ತಾನೂ ಒಬ್ಬ ನಿವಾಸಿಯೆಂದು ಊಹಿಸಿಕೊಳ್ಳುತ್ತಾನೆ. ಗಾಢನಿದ್ದೆಯಲ್ಲಿ ಜಗತ್ತಿನ ವೈವಿಧ್ಯಮಯ ಸ್ವರೂಪವು ನಾಶವಾಗುತ್ತದೆ; ಅಲ್ಲದೆ ಯಾವೊಂದರ ಅರಿವೂ ಅಲ್ಲದ ಅರಿವು ಇರುತ್ತದೆ. ಈ ಮೂರು ಸ್ಥಿತಿಗಳಲ್ಲಿ ಜಾಗ್ರತ್ ಸ್ಥಿತಿಯೇ ವಿಶಿಷ್ಟವಾದುದು. ಏಕೆಂದರೆ, ಈ ಸ್ಥಿತಿಯಲ್ಲಿದ್ದಾಗಲೇ ಮಾನವನಿಗೆ ತಾನು

---

1.ಆತ್ಮೈವ ವಿಷಯೋಪಾಧಿಕೋಽನುಭವ ಇತೀವ ವ್ಯಪದಿಶ್ಯತೇ, ಅವಿವಕ್ಷಿತೋಪಾಧಿಶ್ಚ ಆತ್ಮೇತಿ.

ಅವಿದ್ಯೆಯಲ್ಲಿ ಬಂಧಿತನಾಗಿದ್ದೇನೆ, ಪ್ರಯತ್ನಿಸಿ ಮೋಕ್ಷವನ್ನು ಪಡೆಯಬಹುದು ಎಂದು ತಿಳಿಯಬಹುದು. ಹೀಗೆ ಮಾನವನ ಸ್ಥಾನ ಅನುಕೂಲ್ಯಗಳುಳ್ಳ ಸ್ಥಾನ; ಹೀಗೆಯೇ ಜಾಗ್ರದವಸ್ಥೆಗೆ ಅನುಕೂಲವಾದ ಒಂದಂಶವೂ ಇದೆ. ಜ್ಞಾನಕ್ಕೆ ನಮ್ಮನ್ನು ಕರೆದೊಯ್ಯುವ ನಿಜವಾದ ಆಧ್ಯಾತ್ಮಿಕ ಅನ್ವೇಷಣೆಯೂ ಇಲ್ಲಿ ಸಾಧ್ಯ. ಆದರೆ ಈ ಅನ್ವೇಷಣೆಯು ಜಾಗ್ರತ್ ಲೋಕಕ್ಕೆ ಮಾತ್ರ ಸೀಮಿತಗೊಳಿಸಬಾರದು. ಏಕೆಂದರೆ ಜಾಗ್ರತ್ ಸ್ಥಿತಿಯೆನ್ನುವುದು ಅನುಭವದ ಒಂದು ಭಾಗ ಮಾತ್ರ. ಅನ್ವೇಷಣೆಯು ಫಲಪ್ರದವಾಗಬೇಕಾದರೆ ಸಮಗ್ರ ಅನುಭವವನ್ನು ಅನ್ವೇಷಣೆಗೆ ಒಳಪಡಿಸಬೇಕು. ಹೀಗೆ ಅದ್ವೈತ ವೇದಾಂತದಲ್ಲಿ ಈ ಎಲ್ಲ ಮೂರು ಸ್ಥಿತಿಗಳನ್ನು ಕುರಿತ ಅನ್ವೇಷಣೆಯೂ ಮುಖ್ಯವಾಗುತ್ತದೆ. ಈ ಅನ್ವೇಷಣೆಯ ಪರಿಣಾಮವಾಗಿ ಆತ್ಮವು ಕೇವಲ ಜ್ಞಾನ ಸ್ವರೂಪವಾದುದು. ದೇಹ, ಮನಸ್ಸು ಮತ್ತು ಪ್ರಪಂಚವೆಂಬ ವ್ಯತ್ಯಾಸವಾಗುವ, ನಾಶಹೊಂದುವ ಆಕಸ್ಮಿಕಗಳಿಂದ ಪ್ರಭಾವ ಹೊಂದದೆ ಇರುವುದು ಎಂಬುದು ತಿಳಿದುಬರುತ್ತದೆ. ಮಾಂಡೂಕ್ಯೋಪನಿಷತ್ತಿನ ಮತ್ತು ಗೌಡಪಾದರ ಕಾರಿಕೆಯ ಭಾಷೆಯಲ್ಲಿ ಹೇಳುವುದಾದರೆ ನಿಜವಾದ ಆತ್ಮವು ಚತುರ್ಥ, ತುರೀಯವಾದುದು ಮತ್ತು ಅನುಭವಾತೀತವಾದ ಸತ್ಯ. ಜಾಗ್ರತ್ ಸ್ವಪ್ನ ಸುಷುಪ್ತಿಗಳಲ್ಲಿ ಕಾಣುವ ಅವಸ್ಥೆಗಿಂತ ಬೇರೆಯಾದುದಲ್ಲ, ಅಥವಾ ಅದರ ಜೊತೆಗೆ ಇರಬೇಕಾದುದು ಮತ್ತೊಂದು ಅಲ್ಲ; ಅದು ನಾಲ್ಕನೆಯದು. ಅದು ಎಲ್ಲ ವೈಯಕ್ತಿಕ ಮತ್ತು ಸಾಮೂಹಿಕ ತೋರ್ಕೆಗಳ ಮೂಲಸತ್ಯ.

ಅದ್ವೈತದ ಸತ್ಯವನ್ನು ನಿರೂಪಿಸುವುದಕ್ಕಾಗಲಿ, ಬೌದ್ಧಿಕವಾಗಿ ಅರ್ಥಮಾಡಿಕೊಳ್ಳುವುದಕ್ಕಾಗಲಿ ಹೆಚ್ಚು ಸಮಯ ಬೇಕಾಗುವುದಿಲ್ಲ. ಆದರೆ ಸಾಮಾನ್ಯ ಮಾನವನಿಗೆ ಆ ಸತ್ಯವನ್ನು ಅಂತರ್ಬೋಧೆಯಿಂದ ಅರ್ಥಮಾಡಿಕೊಳ್ಳಬೇಕಾದರೆ ದೀರ್ಘಕಾಲದ ಶಿಕ್ಷಣವೂ ನಿಷ್ಠೆಯೂ ಅಗತ್ಯ.

ಮಾನವನ ಅತಿಶ್ರೇಷ್ಠವಾದ ಗುರಿ ಅನೇಕ ಜನ್ಮಗಳ ಸಂಸಾರಚಕ್ರದಿಂದ ಮುಕ್ತಿಗೊಳ್ಳುವುದು. ಮಾನವರೆಲ್ಲರೂ ಮನಃಪೂರ್ವಕವಾಗಿ ಇದನ್ನು ಗುರುತಿಸುವುದಿಲ್ಲ ಎಂಬುದೇನೋ ಸತ್ಯ. ಅದಕ್ಕೆ ಪ್ರತಿಯಾಗಿ ಅಲ್ಪ ಉದ್ದೇಶಗಳಾದ ಸಿರಿಸುಖಗಳನ್ನು ಹಿಂಬಾಲಿಸಿ ದುಃಖಾತಿಶಯಕ್ಕೆ ಒಳಗಾಗುತ್ತಾರೆ. ಧರ್ಮಸೂತ್ರಗಳ ಮಿತಿಯೊಳಗೆ ಈ ಉದ್ದೇಶಗಳನ್ನು ಸಾಧಿಸಲು ಪ್ರಯತ್ನಪಟ್ಟರೆ ಮಾನವನ ಆಧ್ಯಾತ್ಮಿಕ ಯಾತ್ರೆಯು ಮೊದಲಾಗುವುದಕ್ಕೆ ಮಾರ್ಗವನ್ನು ಸುಗಮವಾಗಿ ಮಾಡುತ್ತದೆ. ಯಾತ್ರಿಕನ ಪ್ರಗತಿಯು ಸರಿಯಾಗಿ ಪ್ರಾರಂಭವಾಗಬೇಕಾದರೆ ಅನಂತವಾದ ನಿರುಪಾಧಿಕವಾದ ಸತ್ಯವೇ ಮಾನವನ ಏಕೈಕ ಗಮ್ಯವೆಂಬ ಸತ್ಯವನ್ನು ಮೊದಲು ಕಂಡುಕೊಂಡಿರಬೇಕು.

ಅದ್ವೈತದ ಪ್ರಕಾರ ಜ್ಞಾನಯೋಗವೇ ನೇರವಾದ ಮುಖ್ಯ ಮಾರ್ಗ. ಅದ್ವೈತದಲ್ಲಿ ಮೋಕ್ಷಕ್ಕೆ ಜ್ಞಾನವೇ ನೇರವಾದ ಮಾರ್ಗವೆಂದು ಹೇಳಿರುವುದೇಕೆಂದರೆ, ಮೋಕ್ಷವೆಂಬುದು ಹೊಸದಾಗಿ ಸಾಧಿಸಬೇಕಾದುದಲ್ಲ. ಆತ್ಮಕ್ಕೆ ಮೋಕ್ಷವೆನ್ನುವುದು

ಶಾಶ್ವತವಾದ ಸ್ವಭಾವ. ಅದು ಆತ್ಮವೇ, ಅದರ ನಿಜ ಸ್ವಭಾವವೇ, ಆಗಿರುವುದರಿಂದ ಮೋಕ್ಷವು ನಿತ್ಯ ಮತ್ತು ಅನಾರಭ್ಯ. ಮೋಕ್ಷವು ಶಾಶ್ವತವಾಗಿ ಸಾಧಿತವಾದ ಗುರಿಯಾಗಿರುವುದರಿಂದಲೇ ಶಂಕರರು ಮೀಮಾಂಸಕರ ಕರ್ಮವಾದದ ವಿರುದ್ಧವಾಗಿ ಕರ್ಮವು ಮೋಕ್ಷಕ್ಕೆ ಸಾಧಕವಲ್ಲ ಎಂದು ವಾದಿಸಿದ್ದಾರೆ. ಕರ್ಮದ ಮೂಲಕ ಸಾಧಿತವಾದ ಯಾವುದೂ ನಾಶವಾಗುವುದು ನಿಶ್ಚಯ. ಕರ್ಮದಿಂದ ಈ ನಾಲ್ಕು ಪರಿಣಾಮಗಳಲ್ಲಿ ಒಂದನ್ನು ಸಾಧಿಸಬಹುದು: (1) ಉತ್ಪಾದ್ಯ, (2) ಆಪ್ಯ, (3) ಸಂಸ್ಕಾರ್ಯ, (4) ವಿಕಾರ್ಯ. ಮೋಕ್ಷವು ಇವೆಲ್ಲದರಿಂದಲೂ ಭಿನ್ನವಾದುದು. ಮೋಕ್ಷ ಸ್ವಭಾವವುಳ್ಳ ಆತ್ಮವು ಉತ್ಪಾದ್ಯವೂ ಅಲ್ಲ, ಆಪ್ಯವೂ ಅಲ್ಲ, ಸಂಸ್ಕಾರ್ಯವೂ ಅಲ್ಲ, ವಿಕಾರ್ಯವೂ ಅಲ್ಲ. ಆತ್ಮನ ನಿಜ ಸ್ವಭಾವವನ್ನು ಪಡೆಯುವುದಕ್ಕೆ ಅವಿದ್ಯೆಯೇ ಅಡ್ಡಿಯಾಗಿದೆ. ಅವಿದ್ಯಾನಾಶವೇ ಸಾಧಿತವಾಗಬೇಕಾಗಿರುವುದು. ಜ್ಞಾನದಿಂದ ಮಾತ್ರ ಅವಿದ್ಯಾನಾಶ ಸಾಧ್ಯ. ಜ್ಞಾನಕ್ಕೂ ಕರ್ಮಕ್ಕೂ ಇರುವ ವಿರೋಧವು ಪರ್ವತದಂತೆ ಅಚಲವಾದುದು. ಕರ್ಮಕ್ಕೂ ಕರ್ಮಫಲಕ್ಕೂ ಅಂಟಿಕೊಳ್ಳದೆ ಜ್ಞಾನಮಾರ್ಗವನ್ನು ಅನುಸರಿಸುವವನಿಗೆ ಮಾತ್ರ ಬ್ರಹ್ಮವಾಗಿರುವ ಆತ್ಮವು ಗೋಚರವಾಗುತ್ತದೆ: ಈ ಮಾರ್ಗದಲ್ಲಿ ಶ್ರವಣ, ಮನನ, ನಿಧಿಧ್ಯಾಸನ ಎಂಬ ಮೆಟ್ಟಲುಗಳಿವೆ. ಇಲ್ಲಿ ವಿಶೇಷವಾಗಿ ಗಮನವಿಡಬೇಕಾದ ಅಂಶವೆಂದರೆ, ಈ ಮಾರ್ಗದ ಗುರಿಯಾಗಿರುವ ಜ್ಞಾನವು ಬೌದ್ಧಿಕವಾದ ಅರಿವು ಮಾತ್ರವಲ್ಲ; ಅದು ಅಂತರ್ಬೋಧಿತವಾದ ನೇರವಾದ ಅನುಭವ.

ಕರ್ಮಯೋಗ ಅಥವಾ ಫಲಿತಾಂಶದ ಕಡೆಗೆ ಗಮನವಿಡದೆ ಮಾಡಿದ ಕರ್ಮಗಳು, ಭಕ್ತಿಯೋಗ ಅಥವಾ ಇಷ್ಟದೈವತೆಗೆ ಶ್ರದ್ಧಾಪೂರ್ವಕವಾದ ಅವಿಭಕ್ತವಾದ ಭಕ್ತಿ, ಧ್ಯಾನಯೋಗ ಅಥವಾ ಚಿತ್ತೈಕಾಗ್ರತೆಯ ಧ್ಯಾನ–ಇವುಗಳ ಮೂಲಕ ಜ್ಞಾನಮಾರ್ಗದಲ್ಲಿ ಮುಂಬರಿಯುವ ಚೈತನ್ಯವುಂಟಾಗುತ್ತದೆ. ಈ ಮಾರ್ಗಗಳ ಮೂಲಕ ಕೆಲವು ಅರ್ಹತೆಗಳುಂಟಾಗುತ್ತವೆ. ಜ್ಞಾನಮಾರ್ಗಕ್ಕೆ ಬೇಕಾದ ಪೂರ್ವಸಿದ್ಧತೆಯನ್ನು ದೊರಕಿಸುವುದೇ ಇವುಗಳ ಉದ್ದೇಶ. ಬ್ರಹ್ಮಸೂತ್ರದ ಪ್ರಥಮ ಸೂತ್ರದಲ್ಲಿರುವ ಮೊದಲ ಪದವಾದ 'ಅಥ' ಎಂಬ ಶಬ್ದವನ್ನು ವಿವರಿಸುತ್ತಾ ಶಂಕರರು ಈ ಅರ್ಹತೆಗಳನ್ನು ನಿರೂಪಿಸುತ್ತಾರೆ. ಅವು ಯಾವುವೆಂದರೆ: ಶಾಶ್ವತ ವಸ್ತುವಿನಿಂದ ನಶ್ವರವಾದವುಗಳನ್ನು ವಿವೇಚಿಸಿ ಕಂಡುಕೊಳ್ಳುವುದು, ಇಹದ ಮತ್ತು ಪರದ ಅಲ್ಪಸುಖಗಳಿಗೆ ಅಂಟಿಕೊಳ್ಳದಿರುವುದು, ಶಾಂತಿ, ಸಮತೆ ಮತ್ತು ಮೋಕ್ಷಾಪೇಕ್ಷೆ ಮುಂತಾದ ಗುಣಗಳನ್ನು ವಿಶೇಷವಾಗಿ ಹೊಂದಿರುವುದು. ವೇದಾಂತ ಅರ್ಥಾನ್ವೇಷಣೆಯು ಮೊದಲಾಗುವುದಕ್ಕೆ ಇವುಗಳಲ್ಲಿ ಮೊದಲನೆಯ ಅರ್ಹತೆಯು ಅತ್ಯಗತ್ಯ. ಈ ಹಂತದಲ್ಲಿ ವಿವೇಚನೆ ಮಾಡುವುದು ಎಂದರೆ, ಸತ್ಯವನ್ನು ಕುರಿತ ಪರಮಜ್ಞಾನವಲ್ಲ. ಅದು ಬಹಿರಂಗ ವಸ್ತುಗಳ ಮೊದಲ ನೋಟದಿಂದ ಮಾಯೆಗೊಳಗಾಗದ ಆಧ್ಯಾತ್ಮಿಕ ಪ್ರವೃತ್ತಿಯನ್ನು ತಿಳಿಸುತ್ತದೆ, ಅಷ್ಟೆ! ಸ್ವಾರ್ಥವಾದ

ಸುಖಾಸಕ್ತಿಯ ಸಂಕುಚಿತ ಬುದ್ಧಿಯು ದೃಷ್ಟಿಯನ್ನು ಕುರುಡಾಗಿಸುತ್ತದೆ. ಈ ಸುಖಾಸಕ್ತಿಯು ಇಹಲೋಕಾನುಬಂಧಿಯಾಗಬಹುದು ಇಲ್ಲವೆ ಸ್ವರ್ಗಾನುಬಂಧಿಯಾಗಬಹುದು. ಮನಸ್ಸು ಅವುಗಳ ಬಗ್ಗೆ ಅತ್ಯಾಪೇಕ್ಷೆ ಹೊಂದಿರುವುದರಿಂದ ಸತ್ಯವನ್ನು ಕಾಣಲು ಶಕ್ತವಾಗುವುದಿಲ್ಲ. ಅನುರಾಗ ದ್ವೇಷ ಮುಂತಾದ ಭಾವೋದ್ರೇಕಗಳ ಹಿಡಿತಕ್ಕೆ ಸಿಕ್ಕಿದಾಗ, ಮನಸ್ಸು ಇಹಲೋಕದ ಸತ್ಯಗಳನ್ನು ಅರ್ಥ ಮಾಡಿಕೊಳ್ಳಲಾರದು. ಆದುದರಿಂದ ಆತ್ಮಸತ್ಯವನ್ನು ತಿಳಿದುಕೊಳ್ಳಬೇಕಾದರೆ ಮನಸ್ಸು ಸಂಪೂರ್ಣವಾಗಿ ಶುದ್ಧಿಗೊಂಡಿರಬೇಕೆಂದು ಹೇಳಲೇಬೇಕಾಗಿಲ್ಲ ಎಂದು ಶಂಕರರು ವಾದಿಸುತ್ತಾರೆ.

ಭಾವಗಳ ಉದ್ರೇಕದಿಂದ ಬಿಡುಗಡೆ ಹೊಂದಿದಮೇಲೆ ಮುಖ್ಯವಾದ ಧರ್ಮಾಚರಣೆಯ ಮೂಲಕ ಮನಸ್ಸು ಹೆಚ್ಚು ದೃಢವಾಗಬೇಕು. ತಪ್ಪಾದ ಮನಃಪ್ರವೃತ್ತಿಯು ನಾಶವಾಗಿ ಸರಿಯಾದವು ಉಂಟಾಗಬೇಕು. ಮನಸ್ಸು ತನ್ನ ಅವಗುಣಗಳನ್ನು ಕಳೆದುಕೊಂಡು ಸದ್ಗುಣಗಳನ್ನು ಬೆಳೆಸಿಕೊಳ್ಳಬೇಕು. ಹೀಗಾದಮೇಲೆ ಮೋಕ್ಷಾಪೇಕ್ಷೆಯು ಮನಸ್ಸಿನಲ್ಲಿ ದೃಢವಾಗಿ ಸ್ಥಾಪಿತವಾಗುತ್ತದೆ. ಈ ಅಪೇಕ್ಷೆಯನ್ನು ಮೋಕ್ಷದ ಬಗೆಗಿರುವ ತೀವ್ರಾನುರಾಗವೆಂದು ತಪ್ಪಾಗಿ ತಿಳಿಯಬಾರದು. ಈ ವಿಷಯವನ್ನು ವಿವರಿಸುತ್ತಾ ಶಂಕರರ ಶಿಷ್ಯರಾದ ಸುರೇಶ್ವರಾಚಾರ್ಯರು ಹೀಗೆ ಹೇಳುತ್ತಾರೆ: ಪರಮಸುಖವಾದ ಮೋಕ್ಷದ ಅಪೇಕ್ಷೆಯು ಅನುರಾಗವಲ್ಲ. ಅದು ಅನುರಾಗವಾಗಿದ್ದರೆ ಏಕಾಂತವಾಸಾಪೇಕ್ಷೆ ಮುಂತಾದುವೂ ಅನುರಾಗವಾಗಬೇಕು, ಆದರೆ ಹಾಗಿಲ್ಲ.

ಕರ್ಮಯೋಗ, ಭಕ್ತಿಯೋಗ, ಧ್ಯಾನಯೋಗಗಳ ಮೂಲಕ ಜ್ಞಾನರ್ಜನೆಗಿರುವ ಅಡ್ಡಿಗಳೆಲ್ಲವೂ ನಿರ್ಮೂಲವಾದಮೇಲೆ, ಆತ್ಮಾನ್ವೇಷಣೆಯ ಮಾರ್ಗವನ್ನು ಯಶಸ್ವಿಯಾಗಿ ಅನುಸರಿಸಿದಮೇಲೆ ಅದ್ವೈತವಾದ ಆತ್ಮದ ಜ್ಞಾನವು, ರಾತ್ರಿ ಕಳೆದಮೇಲೆ ಸೂರ್ಯೋದಯವಾಗುವಂತೆ ಉದಯವಾಗುತ್ತದೆ. ಸೂರ್ಯೋದಯದ ಉಪಮಾನವು ತುಂಬ ಉಚಿತವಾಗಿದೆ. ಏಕೆಂದರೆ, ಅಲ್ಲಿ ಆಗುವುದು ಸೂರ್ಯನ ಉದಯವಲ್ಲ, ಸೂರ್ಯನ ನೋಟವನ್ನು ಅಡ್ಡಿಪಡಿಸುತ್ತಿದ್ದ ರಾತ್ರಿಯ ನಿವಾರಣೆ. ಹೀಗೆಯೇ, ಜ್ಞಾನದ ಮೂಲಕ ಅಜ್ಞಾನವು ನಾಶವಾದೊಡನೆಯೇ ಆತ್ಮವು ತನ್ನಷ್ಟಕ್ಕೆ ತಾನೇ ಗೋಚರವಾಗುತ್ತದೆ. ಇದನ್ನೇ ಮೋಕ್ಷ ಎಂದು ಕರೆಯುತ್ತಾರೆ. ಅಜ್ಞಾನವನ್ನು ನಾಶಮಾಡಿದೊಡನೆಯೇ ಜ್ಞಾನದ ಮೂಲಕ ಮೋಕ್ಷ ಸಿದ್ಧಿಯಾಗುತ್ತದೆ.

ಮೋಕ್ಷವು ಆತ್ಮದ ನಿತ್ಯಸ್ವಭಾವವಾದುದರಿಂದ, ಅದನ್ನು ಸಾಧಿಸಲು ಈ ಭೌತಶರೀರವು ಸಾವಿಗೊಳಗಾಗುವ ತನಕ ಕಾಯಬೇಕಾಗಿಲ್ಲ. ಈ ದೇಹದಲ್ಲಿರುವಾಗಲೇ ಜ್ಞಾನ ಬಂದೊಡನೆಯೆ ಮೋಕ್ಷ ಸಿದ್ಧಿಯಾಗುತ್ತದೆ. ಅಂತಹವರನ್ನು 'ಜೀವನ್ಮುಕ್ತ' ಎಂದು ಕರೆಯುತ್ತಾರೆ. ಅಂಥವನ ದೃಷ್ಟಿಯಿಂದ ಶರೀರವೆಂಬುದು ಇಲ್ಲವೇ ಇಲ್ಲ. ಅಂಥವನು ಮೋಕ್ಷಸಿದ್ಧಿಯಾಗದವರಿಗಾಗಿ ಮಾತ್ರ ಶರೀರಿಯಾಗಿರುತ್ತಾನೆ. ಕೆಲವು ಕಾಲದ ಬಳಿಕ ಶರೀರವು ಸತ್ತಾಗ ನಾವು "ಅವನು ವಿದೇಹ ಮುಕ್ತನಾದನು"

ಎನ್ನುತ್ತೇವೆ. ಆದರೆ ಮುಕ್ತಿಯಲ್ಲಿ ಯಾವ ಬೇಧವೂ ಇಲ್ಲವೆಂಬುದೇ ಸತ್ಯ. ಮುಕ್ತಿ ದೊರಕಿದಮೇಲೆ ಆತ್ಮಕ್ಕೆ ಯಾವ ತೊಳಲಾಟವೂ ಇಲ್ಲ. ಅದು ತನಗೂ ಶಾಶ್ವತ ವಸ್ತುವಿಗೂ ಯಾವ ವ್ಯತ್ಯಾಸವೂ ಇಲ್ಲದಿರುವುದನ್ನು ಅರ್ಥಮಾಡಿಕೊಳ್ಳುತ್ತದೆ. ಇದನ್ನೇ 'ಅದ್ವೈತಾನುಭವ' ಎಂದು ಕರೆಯುತ್ತಾರೆ. "ಹೃದಯದಲ್ಲಿರುವ ಎಲ್ಲ ಅಪೇಕ್ಷೆಗಳೂ ತೊರೆದುಹೋದಮೇಲೆ ನಶ್ವರವಾದ ಮನುಷ್ಯನು ಅವಿನಾಶಿಯಾಗುತ್ತಾನೆ ಮತ್ತು ಇಹದಲ್ಲಿಯೇ ಮುಕ್ತಿಯನ್ನು ಸಾಧಿಸುತ್ತಾನೆ" ಎಂದು ಉಪನಿಷತ್ತು ಹೇಳುತ್ತದೆ.

ಮಾನವನು ಮಾಡುವ ಮೋಕ್ಷಸಾಧನೆಯನ್ನು ಯಾವ ಅರ್ಥದಲ್ಲಿಯೂ ಸ್ವಾರ್ಥಸಾಧನೆಯೆಂದು ಹೇಳಲಾಗುವುದಿಲ್ಲ. ಅದ್ವೈತ ವೇದಾಂತದ ಪ್ರಕಾರ ಮೋಕ್ಷವೆನ್ನುವುದು ವೈಯಕ್ತಿಕತೆ ಮತ್ತು ಅಹಂಭಾವಗಳ ಸಂಕುಚಿತ ದೃಷ್ಟಿಯಿಂದ ಬಿಡುಗಡೆ ಹೊಂದುವುದು. ನಿಜವಾದ ಅರ್ಥದಲ್ಲಿ ಪ್ರಪಂಚಕ್ಕೆ ಉಪಕಾರಿಯಾಗಬಲ್ಲವನು ಸಂಪೂರ್ಣನಾದ ಮಾನವನು ಮಾತ್ರ. ವೇದಾಂತ ಶಿಕ್ಷಣದಲ್ಲಾಗಲೀ, ಪರಮಗುರಿಯನ್ನು ಕುರಿತ ವೇದಾಂತ ಭಾವನೆಗಳಲ್ಲಾಗಲೀ ಸ್ವಾರ್ಥಕ್ಕೆ ಸ್ವಲ್ಪವೂ ಎಡೆಯಿಲ್ಲ. ವೇದಾಂತದ ಅಭ್ಯಾಸಿಯಾಗಿರುವ ವಿದ್ಯಾರ್ಥಿಯು ಈ ಸುವರ್ಣ ಸೂತ್ರಕ್ಕೆ ವಿಧೇಯನಾಗಿರಬೇಕು. ಆತ್ಮಾರ್ಥಿಯಾದವನು ಅಲ್ಪವಾದ ಅಹಂಭಾವಕ್ಕೆ ಎಡೆಗೊಡಬಾರದು. ಇಂಥವರು ಇರುವುದೆ ಪ್ರಪಂಚಕ್ಕೆ ದೊಡ್ಡ ಆಶೀರ್ವಾದ.

ಅದ್ವೈತವನ್ನು ಕ್ರೋಢೀಕರಿಸಿ, ಮಾನವನಿಗೆ ನಿರಾಶೆಗಾಗಲಿ ಸಂದೇಹಕ್ಕಾಗಲಿ ಎಡೆಯಿಲ್ಲವೆಂದು ಸಾರಿದ ಕೀರ್ತಿಯು ಅನುಮಾನವಿಲ್ಲದೆ ಶಂಕರರಿಗೆ ಸೇರಬೇಕು. ಅದ್ವೈತವು ಬೋಧಿಸುವ ಪರಮಸತ್ಯವನ್ನು ಯಾರೂ ಇಲ್ಲವೆನ್ನಲಾಗುವುದಿಲ್ಲ. ಏಕೆಂದರೆ, ಇಲ್ಲವೆನ್ನುವವನಲ್ಲಿಯೂ ಈ ಆತ್ಮವಿದೆ. 'ಉಪದೇಶ ಸಾಹಸ್ರೀ' ಗ್ರಂಥದಲ್ಲಿ ಶಂಕರರು ಹೀಗೆ ಘೋಷಿಸಿದ್ದಾರೆ: "ಆತ್ಮವು ಒಂದು ವಸ್ತುವಲ್ಲ. ಆತ್ಮದಲ್ಲಿ ವ್ಯತ್ಯಾಸವಾಗಲಿ, ಅನೇಕತ್ವವಾಗಲಿ ಇಲ್ಲ." ಆತ್ಮವೇ ಆಗಲಿ, ಇತರರೇ ಆಗಲಿ ಆತ್ಮವನ್ನು ಸ್ವೀಕರಿಸುವುದಕ್ಕೂ ಆಗುವುದಿಲ್ಲ ತಿರಸ್ಕರಿಸುವುದಕ್ಕೂ ಆಗುವುದಿಲ್ಲ. ತಾನೇ ಆತ್ಮವೆಂದು ಬಲ್ಲವನು, ಒಳಗೂ ಹೊರಗೂ ಆತ್ಮವಿದೆಯೆಂದು ಬಲ್ಲವನು, ಅದಕ್ಕೆ ಜನನ ಮರಣಗಳಿಲ್ಲವೆಂದು ಬಲ್ಲವನು, ಜರಾಮೃತ್ಯುವಿಲ್ಲವೆಂದು ಬಲ್ಲವನು ಕಿಂಚಿದ್ಭಯವೆಂಬುದನ್ನು ತಾನೇ ಏಕೆ ಹೊಂದಿರಬೇಕು? ಅನೇಕತ್ವವಿದೆಯೆಂದು ತಪ್ಪಾಗಿ ಭಾವಿಸುವುದರಿಂದ ಹೆದರಿಕೆಯುಂಟಾಗುತ್ತದೆ. ಅದ್ವೈತವಾದ ಪರಮಸತ್ಯವನ್ನು ಅರ್ಥ ಮಾಡಿಕೊಂಡಾಗ ಅಭಯಸ್ಥಿತಿಯೂ ಉಂಟಾಗುತ್ತದೆ. ಅದ್ವೈತ, ಅಭಯ ಎಂಬುವು ಒಂದೇ ಅನುಭವಕ್ಕೆ ಇರುವ ಬೇರೆ ಬೇರೆ ಹೆಸರುಗಳು. ಇದು ಎಲ್ಲರ ಆಜನ್ಮಸಿದ್ಧವಾದ ಹಕ್ಕಾದುದರಿಂದ, ಈ ಅನುಭವದಿಂದ ಯಾರನ್ನೂ ದೂರವಿಡುವುದಾಗುವುದಿಲ್ಲ. ಕರ್ಮಮಾರ್ಗದಲ್ಲಿನ ಅಭ್ಯಾಸ, ನಿಷ್ಠೆ

ಮುಂತಾದುವುಗಳಲ್ಲಿ ವ್ಯತ್ಯಾಸವೆನ್ನುವುದಕ್ಕೆ ಅರ್ಥವಿದೆ. ಆದರೆ ಬ್ರಹ್ಮ, ಬ್ರಹ್ಮಜ್ಞಾನ ಎಂಬೆರಡಕ್ಕೆ ಕಾಲ ದೇಶ ಸನ್ನಿವೇಶಗಳಿಗೆ ಸಂಬಂಧಿಸಿದಂತೆ ಯಾವ ವ್ಯತ್ಯಾಸವೂ ಇರಲಾರದು. ಪ್ರಾಚೀನ ಋಷಿಯಾದ ವಾಮದೇವನಂತೆಯೇ ಶಂಕರರೂ ಹೇಳುತ್ತಾರೆ: ಆಧುನಿಕರಾದ ನಾವೂ, ದುರ್ಬಲರಾದರೂ ಬ್ರಹ್ಮನನ್ನು ತಿಳಿದುಕೊಳ್ಳಲು ಹಕ್ಕುಂಟು, ಅರ್ಹತೆಯೂ ಉಂಟು. ಈ ಸತ್ಯವನ್ನು ಅರ್ಥಮಾಡಿಕೊಳ್ಳಬೇಕೆಂದು ಮಾನವತೆಗೆ ಕರೆಯಿತ್ತು, ಆ ಸತ್ಯಸಾಧನೆಯ ಮಾರ್ಗವನ್ನು ತೋರಿಸಿಕೊಟ್ಟು, ಶಂಕರರು ತಮ್ಮ ಹೆಸರೇ ಸೂಚಿಸುವಂತೆ ಪ್ರಪಂಚಕ್ಕೆ ಮಂಗಳವನ್ನುಂಟುಮಾಡಿದ್ದಾರೆ. ಆದುದರಿಂದಲೇ ಈ ಶ್ಲೋಕ ರಚನೆಯಾಗಿದೆ:

ಶ್ರುತಿಸ್ಮೃತಿಪುರಾಣಾನಾಂ ಆಲಯಂ ಕರುಣಾಲಯಮ್।
ನಮಾಮಿ ಭಗವತ್ಪಾದಂ ಶಂಕರಂ ಲೋಕಶಂಕರಮ್॥

"ಶ್ರುತಿ ಸ್ಮೃತಿ ಪುರಾಣಗಳ ವಿವೇಕವೆಲ್ಲಕ್ಕೂ ಮನೆಯಾದ, ಕರುಣೆಗೆ ಸದನವಾದ, ಲೋಕಕ್ಕೆಲ್ಲ ಮಂಗಳವನ್ನುಂಟುಮಾಡಿದ ಶಂಕರ ಭಗವತ್ಪಾದರಿಗೆ ನಾನು ನಮಸ್ಕರಿಸುತ್ತೇನೆ."

# ಸಂಕೇತ ಸೂಚಿ

| | | |
|---|---|---|
| ಆ.ಬೋ | .... | ಆತ್ಮಬೋಧಃ |
| ಭ.ಗೀ.ಭಾ | .... | ಭಗವದ್ಗೀತಾ ಭಾಷ್ಯಂ |
| ಬ್ರ.ಸೂ.ಭಾ | .... | ಬ್ರಹ್ಮಸೂತ್ರ ಭಾಷ್ಯಂ |
| ಈ.ಉ.ಭಾ | .... | ಈಶಾವಾಸ್ಯೋಪನಿಷದ್ಭಾಷ್ಯಂ |
| ಕೇ.ಉ.ಪ.ಭಾ | .... | ಕೇನೋಪನಿಷತ್ಪದ ಭಾಷ್ಯಂ |
| ಕೇ.ಉ.ವಾ.ಭಾ | .... | ಕೇನೋಪನಿಷದ್ವಾಕ್ಯ ಭಾಷ್ಯಂ |
| ಮಾ.ಉ.ಭಾ | .... | ಮಾಂಡೂಕ್ಯೋಪನಿಷದ್ಭಾಷ್ಯಂ |
| ಮಾ.ಕಾ.ಭಾ | .... | ಮಾಂಡೂಕ್ಯಕಾರಿಕಾ ಭಾಷ್ಯಂ |

# ಶ್ರೀಮದ್ಭಗವತ್ಪೂಜ್ಯಪಾದ ಸೂಕ್ತಿಮಂಜರೀ

## I ಶ್ರುತಿ, ತರ್ಕ ಮತ್ತು ಅನುಭವ

### 1. ಬ್ರಹ್ಮಜ್ಞಾನದ ಮೂಲವಾದ ವೇದಾಂತ ಬೋಧೆ.

ಬ್ರಹ್ಮ ಸರ್ವಜ್ಞಂ ಸರ್ವಶಕ್ತಿ ಜಗದುತ್ಪತ್ತಿಸ್ಥಿತಿಲಯಕಾರಣಂ ವೇದಾಂತಶಾಸ್ತ್ರಾದೇವಾವಗಮ್ಯತೇ. ಕಥಮ್? ಸಮನ್ವಯಾತ್, ಸರ್ವೇಷು ಹಿ ವೇದಾಂತೇಷು ವಾಕ್ಯಾನಿ ತಾತ್ಪರ್ಯೇಣ ಏತಸ್ಯಾರ್ಥಸ್ಯ ಪ್ರತಿಪಾದಕತ್ವೇನ ಸಮನುಗತಾನಿ.

–ಬ್ರ.ಸೂ. ಭಾ. I, i, 4

ಸರ್ವಜ್ಞನೂ ಸರ್ವಶಕ್ತನೂ ಜಗದುತ್ಪತ್ತಿ ಸ್ಥಿತಿ ಲಯ ಕಾರಣನೂ ಆದ ಬ್ರಹ್ಮನನ್ನು ವೇದಾಂತ ಶಾಸ್ತ್ರದಿಂದ ಮಾತ್ರ ತಿಳಿಯಬಹುದು. ಎಲ್ಲ ವೇದಾಂತ ವಾಕ್ಯಗಳಲ್ಲಿಯೂ ತಾತ್ಪರ್ಯವಾಗಿ ಈ ಅರ್ಥವನ್ನೇ ಪ್ರತಿಪಾದಿಸಲಾಗಿದೆ. ಹೀಗಿರುವುದರಿಂದಲೇ ಆ ವಾಕ್ಯಗಳಲ್ಲಿ ಸಮನ್ವಯವಿದೆ.

### 2. ವೇದಾಂತ ಬೋಧೆಯು ವ್ಯತ್ಯಾಸವನ್ನು ನಿರ್ಮೂಲಗೊಳಿಸುತ್ತದೆ.

ಅವಿದ್ಯಾಕಲ್ಪಿತಭೇದನಿವೃತ್ತಿಪರತ್ವಾತ್ ಶಾಸ್ತ್ರಸ್ಯ. ನ ಹಿ ಶಾಸ್ತ್ರಂ ಇದಂತಯಾ ವಿಷಯಭೂತಂ ಬ್ರಹ್ಮ ಪ್ರತಿಪಾದಯಿಷ್ಯತಿ. ಕಿಂ ತರ್ಹಿ? ಪ್ರತ್ಯಗಾತ್ಮತ್ವೇನ ಅವಿಷಯತಯಾ ಪ್ರತಿಪಾದಯದವಿದ್ಯಾಕಲ್ಪಿತಂ ವೇದ್ಯವೇದಿತೃವೇದನಾದಿ ಭೇದಮಪನಯತಿ.

–ಬ್ರ.ಸೂ. ಭಾ. I, i, 4

ಅವಿದ್ಯೆಯುಂಟಾದ ಭೇದವನ್ನು ನಿವೃತ್ತಿಮಾಡುವುದೇ ವೇದಾಂತದ ತಾತ್ಪರ್ಯ. ಶಾಸ್ತ್ರವು ಬ್ರಹ್ಮವನ್ನು ವಿಷಯಭೂತವಾದ ಒಂದು ವಸ್ತುವೆಂದು ಖಂಡಿತವಾಗಿಯೂ ಪ್ರತಿಪಾದಿಸುವುದಿಲ್ಲ. ಹಾಗಾದರಿನ್ನೇನು? ಅವಿದ್ಯೆಯಿಂದಾದ ವೇದ್ಯವಸ್ತುವಲ್ಲದ, ತಿಳಿಯುವವನಲ್ಲದ, ವೇದನೆಯಲ್ಲದ, ಅವಿಷಯವಾದ ಅಂತರಾತ್ಮವೇ ಬ್ರಹ್ಮವೆಂದು ಅದು ಪ್ರತಿಪಾದಿಸುತ್ತದೆ.

### 3. ಪ್ರಮಾಣಭೂತವಾದ ಜ್ಞಾನಕ್ಕೆ ಆಗಮಗಳೇ ಆಧಾರ.

ಯತ್ತು ಉಕ್ತಂ–ಪರಿನಿಷ್ಪನ್ನತ್ವಾತ್ ಬ್ರಹ್ಮಣಿ ಪ್ರಮಾಣಾಂತರಾಣಿ ಸಂಭವೇಯುರಿತಿ, ತದಪಿ ಮನೋರಥಮಾತ್ರಂ. ರೂಪಾದ್ಯಭಾವಾದ್ಧಿನಾಯಮರ್ಥಃ ಪ್ರತ್ಯಕ್ಷಸ್ಯ ಗೋಚರಃ. ಲಿಂಗಾದ್ಯಭಾವಾಚ್ಚ ನಾನುಮಾನಾದೀನಾಂ. ಆಗಮಮಾತ್ರಸಮಧಿಗಮ್ಯ ಏವ ತ್ವಯಮರ್ಥೋ೯ಧರ್ಮವತ್.

–ಬ್ರ.ಸೂ. ಭಾ. II, i, 6

ಸಂಪೂರ್ಣಸತ್ಯವಾದ ಬ್ರಹ್ಮನ ವಿಚಾರದಲ್ಲಿ ಪ್ರಮಾಣಾಂತರಗಳು ಇಲ್ಲವೆಂದು ಏನು ಹೇಳಿದ್ದಾರೋ ಅದು ಅವರ ಊಹೆ ಮಾತ್ರ. ರೂಪಾದಿಗಳಿಲ್ಲದಿರುವುದರಿಂದ ಇದು ಇಂದ್ರಿಯಗೋಚರವಲ್ಲ, ಅನುಮಾನದ ಪರಿಧಿಗೂ ಇದು ಬರುವುದಿಲ್ಲ, ಲಿಂಗಾದಿ ಯಾವ ಸೂಚಕಚಿಹ್ನೆಗಳೂ ಇಲ್ಲ ಮುಂತಾದುವುಗಳು ಅವರ ಅಭಿಪ್ರಾಯ. ಈ ಪರಮಾರ್ಥವನ್ನು ಆಗಮಗಳಿಂದ ಮಾತ್ರ ತಿಳಿಯಬಹುದು, ಧರ್ಮವನ್ನು ತಿಳಿಯುವಂತೆ.

### 4. ಶಾಸ್ತ್ರವೇ ಅಂತ್ಯಪ್ರಮಾಣ.

ಶಾಸ್ತ್ರಂ ತ್ವಂತ್ಯಂ ಪ್ರಮಾಣಂ ಅತದ್ಧರ್ಮಾಧ್ಯಾರೋಪಣಮಾತ್ರ ನಿವರ್ತಕತ್ವೇನ ಪ್ರಾಮಾಣ್ಯಮಾತ್ಮನಃ ಪ್ರತಿಪದ್ಯತೇ, ನ ತು ಅಜ್ಞಾತಾರ್ಥಜ್ಞಾಪಕತ್ವೇನ.

–ಭ.ಗೀ. ಭಾ. ii, 18

ಶಾಸ್ತ್ರವೇ ಅಂತ್ಯಪ್ರಮಾಣ; ಆತ್ಮಕ್ಕೆ ತಪ್ಪಾಗಿ ಆರೋಪಣವಾಗಿರುವ ಧರ್ಮಗಳನ್ನು ನಿವರ್ತಿಸುವುದರಿಂದ ಆತ್ಮಕ್ಕೆ ಪ್ರಾಮಾಣವು ಸಿಕ್ಕುತ್ತದೆ. ಅಜ್ಞಾತವಾದುದನ್ನು ಜ್ಞಾಪಕಮಾಡುವುದರಿಂದಾಗುವುದಿಲ್ಲ.

### 5. ವಿಚಾರ ಮತ್ತು ಜಿಜ್ಞಾಸೆ.

ತತ್ರಾವಿಚಾರ್ಯ ಯತ್ಕಿಂಚಿತ್ಪ್ರತಿಪದ್ಯಮಾನೋ ನಿಃಶ್ರೇಯಸಾತ್ ಪ್ರತಿಹನ್ಯೇತ, ಅನರ್ಥಂ ಚ ಈಯಾತ್. ತಸ್ಮಾತ್ ಬ್ರಹ್ಮಜಿಜ್ಞಾಸೋಪನ್ಯಾಸಮುಖೇನ ವೇದಾಂತವಾಕ್ಯಮೀಮಾಂಸಾ ತದವಿರೋದಿತರ್ಕೋ೯ಪಕರಣಾ ನಿಃಶ್ರೇಯಸಪ್ರಯೋಜನಾ ಪ್ರಸ್ತೂಯತೇ.

–ಬ್ರ.ಸೂ. ಭಾ. I, i, 1

ಇಲ್ಲಿ ವಿಚಾರಮಾಡದೆ ಯಾರಾದರೂ ಯಾವುದನ್ನಾದರೂ ಒಪ್ಪಿಕೊಂಡುಬಿಟ್ಟರೆ, ಒಳ್ಳೆಯದನ್ನು ಪಡೆಯಲಾರದೆ ಅನರ್ಥಕ್ಕೆ ಒಳಗಾಗುತ್ತಾರೆ. ಆದುದರಿಂದ ಬ್ರಹ್ಮಜಿಜ್ಞಾಸೆಯಲ್ಲಿ ಅಪೇಕ್ಷೆಯಿದೆಯೆಂದು ಹೇಳಿದರೆ ತದವಿರೋಧವಾದ ತರ್ಕದ ಉಪಕರಣವನ್ನೂ ಅದರಿಂದುಂಟಾಗುವ ನಿಃಶ್ರೇಯಸ್ಸನ್ನೂ ಅದನ್ನು ಕೊಡುವ ವೇದಾಂತವಾಕ್ಯಮೀಮಾಂಸೆಯನ್ನೂ ಸ್ತುತಿಮಾಡಿದಂತಾಗುತ್ತದೆ.

**6. ತರ್ಕವು ಸಹಾಯಕವಾದುದು.**

ಶ್ರುತ್ಯೈವ ಚ ಸಹಾಯತ್ವೇನ ತರ್ಕಸ್ಯಾಪ್ಯಭ್ಯುಪೇತತ್ವಾತ್.

–ಬ್ರ.ಸೂ. ಭಾ. I, i, 2

ಶ್ರುತಿಗಳಿಗೆ ಸಹಾಯಕವಾಗಿರುವಂತೆ ತರ್ಕವನ್ನೂ ಒಪ್ಪಬಹುದು.

**7. ಅನುಭವವು ಒಂದು ಪರೀಕ್ಷೆ.**

ನ ಧರ್ಮಜಿಜ್ಞಾಸಾಯಾಮಿವ ಶ್ರುತ್ಯಾದಯ ಏವ ಪ್ರಮಾಣಂ ಬ್ರಹ್ಮ–ಜಿಜ್ಞಾಸಾಯಾಂ. ಕಿಂತು ಶ್ರುತ್ಯಾದಯೋಽನುಭವಾದಯಶ್ಚ ಯಥಾಸಂಭವಮಿಹ ಪ್ರಮಾಣಂ, ಅನುಭವಾವಸಾನತ್ವಾತ್ ಭೂತವಸ್ತುವಿಷಯತ್ವಾಚ್ಚ ಬ್ರಹ್ಮಜ್ಞಾನಸ್ಯ.

–ಬ್ರ.ಸೂ. ಭಾ. I, i, 2

ಧರ್ಮಜಿಜ್ಞಾಸೆಯಲ್ಲಿ ಶ್ರುತಿ ಮುಂತಾದುವುಗಳೇ ಪ್ರಮಾಣಗಳು. ಬ್ರಹ್ಮಜಿಜ್ಞಾಸೆಯಲ್ಲಿ ಹಾಗಲ್ಲ. ಆದರೆ ಶ್ರುತಿ ಮುಂತಾದುವುಗಳು ಮತ್ತು ಅನುಭವ–ಇವು ಸಾಧ್ಯವಾದುದರಿಂದ ಅವು ಪ್ರಮಾಣಗಳಾಗುತ್ತವೆ. ಬ್ರಹ್ಮಜ್ಞಾನಕ್ಕೆ ನಿತ್ಯ–ಸತ್ಯವೇ ತಿರುಳು; ಅನುಭವವೇ ಅದರ ಪರಾಕಾಷ್ಠೆ.

**8. ಬ್ರಹ್ಮಜ್ಞಾನದ ಪರಿಣಾಮ.**

ಅನುಭವಾವಸಾನಂ ಚ ಬ್ರಹ್ಮವಿಜ್ಞಾನಂ ಅವಿದ್ಯಾಯಾ ನಿವರ್ತಕಮ್, ಮೋಕ್ಷಸಾಧನಂ ಚ ದೃಷ್ಟಫಲತಯಾ ಇಷ್ಯತೇ.

–ಬ್ರ.ಸೂ. ಭಾ. II, i, 4

ಅನುಭವದಲ್ಲಿ ಕೊನೆಗೊಳ್ಳುವ ಬ್ರಹ್ಮಜ್ಞಾನವು ಅವಿದ್ಯೆಯನ್ನು ನಿವರ್ತಿಸುತ್ತದೆ. ಅದು ಮೋಕ್ಷಸಾಧನವೇ ಅಲ್ಲದೆ ಕಣ್ಣಿಗೆಕಾಣುವ ಫಲವನ್ನು ನೀಡುತ್ತದೆ.

# II ಬ್ರಹ್ಮ–ಆತ್ಮ

**9. ತಿಳಿದಿರುವುದಕ್ಕಿಂತ ಬೇರೆ ಮತ್ತು ತಿಳಿಯದಿರುವುದಕ್ಕಿಂತ ಉತ್ತಮ.**

ಕ್ವಚಿತ್ಕಿಂಚಿತ್ಕಸ್ಯಚಿದ್ವಿದಿತಂ ಸ್ಯಾದಿತಿ ಸರ್ವಮೇವ ವ್ಯಾಕೃತಂ ವಿದಿತಮೇವ. ತಸ್ಮಾದನ್ಯದೇವೇತ್ಯರ್ಥಃ. ಅವಿದಿತಮಜ್ಞಾತಂ ತರ್ಹೀತಿ ಪ್ರಾಪ್ತೇ ಆಹ–ಅಥೋ ಅವಿದಿತಾದ್ವಿದಿತವಿಪರೀತಾದವ್ಯಾಕೃತಾದವಿದ್ಯಾಲಕ್ಷಣಾದ್ವ್ಯಾಕೃತಬೀಜಾತ್... ಯದ್ವಿದಿತಂ ತದಲ್ಪಂ ಮರ್ತ್ಯಂ ದುಃಖಾತ್ಮಕಂ ಚೇತಿ ಹೇಯಂ. ತಸ್ಮಾದ್ವಿದಿತಾದನ್ಯದ್ಬ್ರಹ್ಮ ಇತ್ಯುಕ್ತೇತು ಅಹೇಯತ್ವಮುಕ್ತಂ ಸ್ಯಾತ್. ತಥಾ ಅವಿದಿತಾದಧೀತ್ಯುಕ್ತೇ

ಅನುಪಾದೇಯತ್ವಮುಕ್ತಂ ಸ್ಯಾತ್.....ನ ಹ್ಯಾನ್ಯಸ್ಯ ಸ್ವಾತ್ಮನೋ ವಿದಿತಾವಿದಿತಾಭ್ಯಾಂ ಅನ್ಯತ್ವಂ ವಸ್ತುನಃ ಸಂಭವತೀತ್ಯಾತ್ಮಾ ಬ್ರಹ್ಮ...

ಕೇ.ಉ. ಪ. ಭಾ. i, 4

ಆಕಾರವನ್ನು ಹೊಂದಿರುವುದು ಜ್ಞಾತವಾದ ವಿಷಯ. ಏಕೆಂದರೆ ಅದು ಎಲ್ಲಾದರೂ ಸ್ವಲ್ಪಮಟ್ಟಿಗಾದರೂ ಯಾರಿಗಾದರೂ ತಿಳಿದಿರುತ್ತದೆ. ಆದುದರಿಂದ ಬ್ರಹ್ಮವು ಇವುಗಳಿಂದ ಬೇರೆಯಾದುದು. ಆದುದರಿಂದ ಅದು ತಿಳಿಯದಿರುವ ವಿಷಯವೇ? ಈ ಪ್ರಶ್ನೆಗೆ ಉತ್ತರವಾಗಿ ಹೀಗೆ ಹೇಳಲಾಗಿದೆ: ತಿಳಿಯದಿರುವುದಕ್ಕಿಂತ ಬೇರೆಯಾದುದು ಮತ್ತು ಅದಕ್ಕಿಂತ ಉತ್ತಮವಾದುದು. ಅಂದರೆ ಜ್ಞಾತವಾದುದಕ್ಕೆ ವಿರುದ್ಧವಾದುದು ಅಜ್ಞಾತಕ್ಕಿಂತ ಉತ್ತಮವಾದುದು..ಸ್ವರೂಪಸ್ಥಿತಿಗೆ ಬೀಜವಾದದ್ದೇ ಅವಿದ್ಯೆ. ನಮಗೆ ತಿಳಿದಿರುವುದು ಅಲ್ಪ, ಮರ್ತ್ಯ ಮತ್ತು ದುಃಖಾತ್ಮಕವಾದುದು. ಆದುದರಿಂದ ತುಂಬ ಹೇಯವಾದುದು. ಆದುದರಿಂದ ತಿಳಿದಿರುವುದಕ್ಕಿಂತ ಬ್ರಹ್ಮ ಬೇರೆ ಎಂದಮೇಲೆ ಅದು ಹೇಯವಾದುದಲ್ಲ ಎಂದು ಹೇಳಿದಂತಾಯಿತು. ಹಾಗೆಯೇ ಅಜ್ಞಾತವಾದುದಕ್ಕಿಂತ ಉತ್ತಮವಾದುದು ಎಂದು ಹೇಳಿದಮೇಲೆ ಅದನ್ನು ಒಪ್ಪಿಕೊಳ್ಳಬಾರದು ಎಂದು ಹೇಳಿದಂತಾಯಿತು...ತನ್ನ ಆತ್ಮವನ್ನು ಬಿಟ್ಟು ಜ್ಞಾತವಾದುದು ಅಜ್ಞಾತವಾದುದು ಈ ಎರಡಕ್ಕೂ ಬೇರೆಯಾದುದು ಯಾವುದೂ ಇಲ್ಲ. ಆದುದರಿಂದ ಆತ್ಮವೇ ಬ್ರಹ್ಮ.

## 10. ಆತ್ಮವೇ ಜ್ಞಾನ.

ನ ತು ನಿರುಪಾಧಿಕಸ್ಯಾತ್ಮನ ಏಕತ್ವೇ ಸ್ವಸಂವೇದ್ಯತಾ ಪರಸಂವೇದ್ಯತಾ ವಾ ಸಂಭವತಿ. ಸಂವೇದನಸ್ವರೂಪತ್ವಾತ್ ಸಂವೇದನಾಂತರಾಪೇಕ್ಷಾ ಚ ನ ಸಂಭವತಿ. ಯಥಾ ಪ್ರಕಾಶಸ್ಯ ಪ್ರಕಾಶಾಂತರಾಪೇಕ್ಷಯಾ ನ ಸಂಭವಃ ತದ್ವತ್.

ಕೇ. ಉ. ಪ. ಭಾ. I, 4

ನಿರುಪಾಧಿಕವಾದ ಆತ್ಮವು ಏಕವಾಗಿರುವುದರಿಂದ ಅದಕ್ಕೆ ಸ್ವಸಂವೇದನೆಯಾಗಲಿ ಪರಸಂವೇದನೆಯಾಗಲಿ ಇರುವುದು ಸಾಧ್ಯವಿಲ್ಲ. ಪ್ರಕಾಶವು ಮತ್ತೊಂದು ಪ್ರಕಾಶವಸ್ತುವನ್ನು ಹೇಗೆ ಅವಲಂಬಿಸಿರುವುದಿಲ್ಲವೋ ಹಾಗೆಯೇ ಆತ್ಮವು ಸಂವೇದನ ಸ್ವರೂಪವಾದುದರಿಂದ ಅದಕ್ಕೆ ಬೇರೆ ಸಂವೇದನೆಯ ಅಪೇಕ್ಷೆಯಿರುವುದಿಲ್ಲ.

## 11. ಬ್ರಹ್ಮನನ್ನು ಸುಲಭವಾಗಿ ತಿಳಿಯುವುದು ಸಾಧ್ಯವಿಲ್ಲ.

ಯತ್ತು ವಿಧ್ವಸ್ತಸರ್ವೋಪಾಧಿವಿಶೇಷಂ ಶಾಂತಮನಂತಮೇಕಮದ್ವೈತಂ ಭೂಮಾಖ್ಯಂ ನಿತ್ಯಂ ಬ್ರಹ್ಮ, ನ ತತ್ ಸುವೇದ್ಯಮ್

–ಕೇ. ಉ. ಪ. ಭಾ. II, 1

ಎಲ್ಲ ಉಪಾಧಿಗಳನ್ನೂ ಕಳೆದುಕೊಂಡಿರುವ, ಶಾಂತವೂ ಅನಂತವೂ ಏಕವೂ ಅದ್ವೈತವೂ ಭೂಮವೂ ಶಾಶ್ವತವೂ ಆದ ಬ್ರಹ್ಮನನ್ನು ತಿಳಿಯುವುದು ಸುಲಭವಲ್ಲ.

## 12. ಆತ್ಮವು ಎಲ್ಲ ಬೋಧತ್ವವನ್ನು ಗುರುತಿಸಬಲ್ಲದು.

ನ್ಯಾಯಶ್ಚ ಗುಣವದ್ಗುಣವತಾ ಸಂಸೃಜ್ಯತೇ, ನಾತುಲ್ಯಜಾತೀಯಂ, ಅತಃ ನಿರ್ಗುಣಂ ನಿರ್ವಿಶೇಷಂ ಕೇನಚಿದಪ್ಯತುಲ್ಯಜಾತೀಯೇನ ಸಂಸೃಜ್ಯತ ಇತ್ಯೇತತ್ ನ್ಯಾಯವಿರುದ್ಧಂ ಭವೇತ್, ತಸ್ಮಾತ್, ನಿತ್ಯಾಲುಪ್ತಜ್ಞಾನಸ್ವರೂಪ ಜ್ಯೋತಿರಾತ್ಮಾ ಬ್ರಹ್ಮ ಇತ್ಯಯಮರ್ಥಃ ಬೋಧಬೋದ್ಧೃತ್ವೇ ಆತ್ಮನಃ ಸಿಧ್ಯತಿ ನಾನ್ಯಥಾ.

–ಕೇ. ಉ. ಪ. ಭಾ. ii, 4

ಗುಣಾಂತವಾದದ್ದು ಗುಣವಂತವಾದದ್ದರೊಡನೆ ಸಂಬಂಧವನ್ನು ಪಡೆಯುತ್ತದೆ; ಅಸಮಾನವಾದ ಬೇರೆಯ ವರ್ಗದೊಡನೆ ಪಡೆಯುವುದಿಲ್ಲ ಎಂಬುದು ನ್ಯಾಯ. ಆದುದರಿಂದ ನಿರ್ಗುಣವೂ ನಿರ್ವಿಶೇಷವೂ ಆದುದು ತನಗೆ ಅಸಮಾನವಾದ ಜಾತಿವಸ್ತುಗಳೊಡನೆ ಸಂಬಂಧವನ್ನು ಪಡೆಯುತ್ತದೆಂಬುದು ನ್ಯಾಯವಿರುದ್ಧವಾಗುತ್ತದೆ. ಹೀಗೆ ಬ್ರಹ್ಮವು ನಿತ್ಯವಾದ ಅಲುಪ್ತವಾದ ಜ್ಞಾನದ ಜ್ಯೋತಿ. ಆತ್ಮವು ಎಲ್ಲ ಬೋಧವಿಷಯಗಳನ್ನು ತಿಳಿಯಲು ಶಕ್ತವಾದುದಾದರೆ ಈ ಅರ್ಥವು ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಇಲ್ಲ.

## 13. ಆತ್ಮವು ಹೇಯವಾದುದೂ ಅಲ್ಲ ಉಪಾದೇಯವಾದುದೂ ಅಲ್ಲ.

ಆತ್ಮತ್ವಾನ್ನ ಹೇಯೋ ಉಪಾದೇಯೋ ವಾ. ಅನ್ಯತ್ ಹಿ ಅನ್ಯೇನ ಹೇಯಂ ಉಪಾದೇಯಂ ವಾ. ನ ತೇನೈವ ತದ್ಯಸ್ಯ ಕಸ್ಯಚಿದ್ಧೇಯಂ ಉಪಾದೇಯಂ ವಾ ಭವತಿ. ಆತ್ಮಾ ಚ ಬ್ರಹ್ಮಸರ್ವಾಂತರತ್ವಾದವಿಷಯಃ ಅತೋನ್ಯಸ್ಯಾಪಿ ನ ಹೇಯಂ ಉಪಾದೇಯಂ ವಾ. ಅನ್ಯಾಭಾವಾಚ್ಚ.

–ಕೇ. ಉ. ವಾ. ಭಾ. i, 4

ಅದು, ಆತ್ಮವಾಗಿರುವುದರಿಂದ, ಹೇಯವಾದುದೂ ಅಲ್ಲ ಉಪಾದೇಯವಾದುದೂ ಅಲ್ಲ. ಒಂದು ವಸ್ತುವು ಇನ್ನೊಂದರಿಂದ ಹೇಯವೂ ಉಪಾದೇಯವೂ ಆಗಿರಬಹುದು. ಆದರೆ ಒಂದೇ ವಸ್ತುವು ತನ್ನನ್ನೇ ಹೇಯವಾಗಿ ಕಾಣುವುದೂ ಉಪಾದೇಯವಾಗಿ ಕಾಣುವುದೂ ಅಸಾಧ್ಯ. ಆತ್ಮವೇ ಬ್ರಹ್ಮ; ಅದು ಎಲ್ಲರ ಅಂತರಾತ್ಮವಾದುದರಿಂದ ಅದು ಅವಿಷಯವಾಗುತ್ತದೆ. ಇನ್ನೊಂದರಿಂದ ಅದು ಹೇಯವಾಗಿಯಾಗಲೀ ಉಪಾದೇಯವಾಗಿಯಾಗಲೀ ಗಣಿಸಲ್ಪಟ್ಟುದಲ್ಲ. ಏಕೆಂದರೆ ಇದನ್ನು ಬಿಟ್ಟು ಇನ್ನೊಂದು ಸತ್ಯವಿಲ್ಲ.

## 14. ಆತ್ಮಕ್ಕೆ ವಿಕಾರವಿಲ್ಲ.

ಸರ್ವವ್ಯಾಪೀ ತದಾತ್ಮತತ್ತ್ವಂ ಸರ್ವಸಂಸಾರಧರ್ಮವರ್ಜಿತಂ ನಿರುಪಾಧಿಕೇನ ಸ್ವರೂಪೇಣಾವಿಕ್ರಿಯಮೇವ ಸತ್, ಉಪಾಧಿಕೃತಾಃ ಸರ್ವಾಃ ಸಂಸಾರವಿಕ್ರಿಯಾ ಅನುಭವತೀ ವಾ ವಿವೇಕಿನಾಂಮೂಢಾನಾಮನೇಕಮಿವ ಚ ಪ್ರತಿದೇಹಂ ಪ್ರತ್ಯವಭಾಸತೇ.

-ಈ.ಉ.ಭಾ.4

ಸರ್ವವ್ಯಾಪಿಯಾದ ಆತ್ಮವು ಸಂಸಾರದ ಸರ್ವಧರ್ಮಗಳಿಂದಲೂ ವಿರಹಿತವಾದುದು. ನಿರುಪಾಧಿಕಸ್ವರೂಪದಿಂದ ಅವಿಕಾರವಾದುದು. ಅವಿವೇಕಿಗಳಾದ ಮೂಢರಿಗೆ ಉಪಾಧಿಗಳಿಂದ ಉಂಟಾಗುವ ಸಂಸಾರ ವಿಕಾರಗಳಿಗೆ ಒಳಗಾಗದಂತೆಯೂ ಅನೇಕವಾಗಿದ್ದಂತೆಯೂ ಪ್ರತಿಯೊಂದು ದೇಹದಲ್ಲಿಯೂ ಒಂದೊಂದು ಇದ್ದಂತೆಯೂ ಕಾಣುತ್ತದೆ.

### 15. ಆತ್ಮವನ್ನು ನಿರಾಕರಿಸುವುದು ಸಾಧ್ಯವಿಲ್ಲ.

ಆತ್ಮನಶ್ಚ ಪ್ರತ್ಯಾಖ್ಯಾತುಮಶಕ್ಯತ್ವಾತ್, ಯ ಏವ ನಿರಾಕರ್ತಾ ತಸ್ಯೈವಾತ್ಮತ್ವಾತ್

–ಬ್ರ. ಸೂ. ಭಾ. I, 1, 4

ಆತ್ಮವನ್ನು ನಿರಾಕರಿಸುವುದು ಸಾಧ್ಯವಿಲ್ಲ. ಯಾರು ನಿರಾಕರಿಸುತ್ತಾರೋ ಅವರಲ್ಲಿಯು ಅದೇ ಆತ್ಮವಿದೆ.

## III. ಬ್ರಹ್ಮ ಮತ್ತು ಈಶ್ವರ

### 16. ಬ್ರಹ್ಮನ ದ್ವಿರೂಪಗಳು.

ದ್ವಿರೂಪಂ ಹಿ ಬ್ರಹ್ಮ ಅವಗಮ್ಯತೇ, ನಾಮರೂಪವಿಕಾರಭೇದೋಪಾಧಿವಿಶಿಷ್ಟಂ, ತದ್ವಿಪರೀತಂ ಚ ಸರ್ವೋಪಾಧಿವಿವರ್ಜಿತಂ... ಏಕಮಪಿ ಬ್ರಹ್ಮ ಅಪೇಕ್ಷಿತೋಪಾಧಿಸಂಬಂಧಂ ನಿರಸ್ತೋಪಾಧಿಸಂಬಂಧಂ ಚ ಉಪಾಸ್ಯತ್ವೇನ ಜ್ಞೇಯತ್ವೇನ ಚ ವೇದಾಂತೇಷೂಪದಿಶ್ಯತೇ.

–ಬ್ರ.ಸೂ.ಭಾ. I, i, 11

ಬ್ರಹ್ಮವು ದ್ವಿರೂಪವಾದುದೆಂದು ತಿಳಿದಿದೆ. ನಾಮರೂಪವಿಕಾರಭೇದಗಳಿಂದ ಕೂಡಿದುದು ಒಂದು. ಅದಕ್ಕೆ ವಿರುದ್ಧವಾದ ಸರ್ವ ಉಪಾಧಿವಿವರ್ಜಿತವಾದುದು ಇನ್ನೊಂದು. ಬ್ರಹ್ಮವು ಒಂದೇ ಆದರೂ ವೇದಾಂತ ಗ್ರಂಥಗಳಲ್ಲಿ ಅಪೇಕ್ಷಿತವಾದ ಉಪಾಧಿಗಳಿಗೆ ಸಂಬಂಧಿಸಿದಂತೆ ಧ್ಯಾನಮಾಡುವುದಕ್ಕೆ ಒಂದೆಂದೂ ನಿರುಪಾಧಿಕವಾದುದೆಂದು ಅರಿಯಲು ಒಂದೆಂದೂ ಉಪದೇಶಮಾಡಲ್ಪಟ್ಟಿದೆ.

### 17. ಬ್ರಹ್ಮವು ನಿರ್ಗುಣವಾದುದು ನಿಷ್ಕ್ರಿಯವಾದುದು.

ನ ತು ಬ್ರಹ್ಮ ಜಾತಿಮತ್, ಅತೋ ನ ಸದಾದಿ ಶಬ್ದವಾಚ್ಯಂ, ನಾಪಿ ಗುಣವತ್, ಯೇನ ಗುಣಶಬ್ದೇನೋಚ್ಯೇತ, ನಿರ್ಗುಣತ್ವಾತ್, ನಾಪಿ ಕ್ರಿಯಾಶಬ್ದವಾಚ್ಯಮ್, ನಿಷ್ಕ್ರಿಯತ್ವಾತ್.

–ಭ. ಗೀ. ಭಾ. xii, 12

ಬ್ರಹ್ಮವು ಯಾವ ಜೀವಜಾತಿಗಳಿಗೂ ಸೇರಿದ್ದಲ್ಲ. ಆದುದರಿಂದ ಅದನ್ನು 'ಸತ್' ಎಂದು ಕರೆಯಲಾಗುವುದಿಲ್ಲ. ಅದಕ್ಕೆ ಗುಣಗಳಿಲ್ಲ, ಏಕೆಂದರೆ ಅದು ನಿರ್ಗುಣವಾದುದು. ಆದುದರಿಂದ ಅದನ್ನು ಗುಣಗಳನ್ನು ತಿಳಿಸುವ ಶಬ್ದಗಳಿಂದ ಸೂಚಿಸುವುದು ಅಸಾಧ್ಯ. ಅದು ನಿಷ್ಕ್ರಿಯವಾದುದು. ಆದುದರಿಂದ ಕ್ರಿಯಾವಾಚಕ ಶಬ್ದಗಳಿಂದ ಸೂಚಿಸುವುದೂ ಅಸಾಧ್ಯ.

## 18. ಹೆಸರಿನಿಂದ ವ್ಯತ್ಯಾಸವಿದ್ದಂತೆ ಕಾಣುತ್ತದೆ.

ಏಕೋಹ್ಯಯಮಾತ್ಮಾ ನಾಮಮಾತ್ರಭೇದೇನ ಬಹುಧಾಭಿಧೀಯತ ಇತಿ.

–ಬ್ರ.ಸೂ.ಭಾ. I, iv, 12

ಕೇವಲ ಹೆಸರಿನಲ್ಲಿ ಬೇರೆ ಬೇರೆಯಾಗಿರುವುದರಿಂದ ಏಕವಾದ ಆತ್ಮವನ್ನು ಬೇರೆಬೇರೆಯಾಗಿ ಕರೆಯುತ್ತಾರೆ.

## 19. ಬ್ರಹ್ಮ ಚೈತನ್ಯ.

ಅಸ್ಯ ಜಗತೋ ನಾಮರೂಪಾಭ್ಯಾಂ ವ್ಯಾಕೃತಸ್ಯ ಅನೇಕಕರ್ತೃಭೋಕ್ತೃಸಂಯುಕ್ತಸ್ಯ ಪ್ರತಿನಿಯತದೇಶಕಾಲಕ್ರಿಯಾಫಲಾಶ್ರಯಸ್ಯ ಮನಸಾಪ್ಯಚಿಂತ್ಯರಚನಾರೂಪಸ್ಯ ಜನ್ಮಸ್ಥಿತಿಭಂಗಂ ಯತಃ ಸರ್ವಜ್ಞಾತ್ ಸರ್ವಶಕ್ತೇಃ ಕಾರಣಾದ್ಭವತಿ ತದ್ಬ್ರಹ್ಮ.

–ಬ್ರ.ಸೂ.ಭಾ. I, i, 2

ಸರ್ವಜ್ಞವಾದ ಸರ್ವಶಕ್ತವಾದ ನಾಮರೂಪಗಳನ್ನು ಹೊಂದಿರುವ, ಅನೇಕ ಕರ್ತೃಭೋಕ್ತೃಗಳನ್ನು ಹೊಂದಿರುವ, ಕಾಲ ದೇಶ ಕ್ರಿಯಾಫಲಗಳ ಆಶ್ರಯವಾದ, ಮನಸ್ಸಿನಿಂದ ಚಿಂತಿಸಲೂ ಅಸಾಧ್ಯವಾದ ರೂಪವುಳ್ಳ ಯಾವ ಕಾರಣದಿಂದ ಈ ಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳು ಉಂಟಾಗುತ್ತವೆಯೋ ಅದೇ ಬ್ರಹ್ಮ.

## 20. ದೇವರಿದ್ದಾನೆ ಎಂಬುದಕ್ಕೆ ವಾದ.

ಯದಿದಂ ಜಗತ್ ದೇವಗಂಧರ್ವಯಕ್ಷರಕ್ಷಃ ಪಿತೃಪಿಶಾಚಾದಿಲಕ್ಷಣಂದ್ಯು – ವಿಯತ್ – ಪೃಥಿವೀ – ಆದಿತ್ಯ – ಚಂದ್ರ – ಗ್ರಹ – ನಕ್ಷತ್ರವಿಚಿತ್ರಂ ವಿವಿಧಪ್ರಾಣ್ಯುಪಭೋಗಯೋಗ್ಯಸ್ಥಾನ ಸಾಧನಸಂಬಂಧಿ, ತದತ್ಯಂತ ಕುಶಲಶಿಲ್ಪಿಭಿರಪಿ ದುರ್ನಿರ್ಮಾಣಂ ದೇಶಕಾಲನಿಮಿತ್ತಾನುರೂಪನಿಯತ ಪ್ರವೃತ್ತಿನಿವೃತ್ತಿಕ್ರಮಂ ಏತದ್ಭೋಕ್ತೃಕರ್ಮವಿಭಾಗಜ್ಞಪ್ರಯತ್ನಪೂರ್ವಕಂ ಭವಿತುಮರ್ಹತಿ, ಕಾರ್ಯತ್ವೇ ಸತಿ ಯಥೋಕ್ತಲಕ್ಷಣತ್ವಾತ್ ಗೃಹಪ್ರಾಸಾದರಥಶಯನಾದಿವತ್ ವಿಪಕ್ಷೇ ಆತ್ಮಾದಿವತ್.

–ಕೇ. ಉ. ವಾ. ಭಾ. iii

ದೇವ ಗಂಧರ್ವ ಯಕ್ಷ ರಾಕ್ಷಸ ಪಿತೃ ಪಿಶಾಚಾದಿಗಳಿಂದ ಕೂಡಿರುವ ಸ್ವರ್ಗ, ಆಕಾಶ, ಪೃಥಿವೀ, ಆದಿತ್ಯ, ಚಂದ್ರ, ಗ್ರಹ, ನಕ್ಷತ್ರಗಳಿಂದ ವಿಚಿತ್ರವಾಗಿರುವ, ವಿವಿಧ ಪ್ರಾಣಿಗಳಿಗೆ ಉಪಭೋಗಸಾಧನ ಮತ್ತು ಸ್ಥಾನಗಳಿಂದ ಕೂಡಿರುವ,

ಅತ್ಯಂತ ಕುಶಲಿಗಳಾದ ಶಿಲ್ಪಿಗಳಿಂದಲೂ ನಿರ್ಮಿಸಲಸಾಧ್ಯವಾದ, ದೇಶ ಕಾಲ ನಿಮಿತ್ತಗಳಿಗೆ ಅನುರೂಪವಾಗಿ ಪ್ರವೃತ್ತಿ ನಿವೃತ್ತಿಗಳನ್ನು ಹೊಂದಿರುವ ಈ ಜಗತ್ತು ಭೋಕ್ತೃಗಳನ್ನೂ ಕರ್ಮವನ್ನೂ ಚೆನ್ನಾಗಿ ತಿಳಿದಿರುವವನ ಪ್ರಯತ್ನಪೂರ್ವಕವಾಗಿ ಹುಟ್ಟಿರಬೇಕು. ಮನೆ, ದೇವಾಲಯ, ತೇರು, ಹಾಸಿಗೆ, ಪೀಠ ಮುಂತಾದುವುಗಳು ಹಿಂದೆ ವರ್ಣಿಸಿರುವ ಲಕ್ಷಣಗಳನ್ನು ಹೊಂದಿರುವಂತೆ ಇನ್ನೊಬ್ಬನ ಕಾರ್ಯವಾಗಿರಬೇಕು. ಇಲ್ಲದಿದ್ದರೆ ಅದಕ್ಕೆ ವಿರೋಧವಾಗಿ ಆತ್ಮವೇ ಮುಂತಾದುವುಗಳಂತೆ ಆ ಲಕ್ಷಣಗಳನ್ನು ಹೊಂದಿಲ್ಲದೆ ಇರಬೇಕು.

## 21. ದೇವರ ಸರ್ವಜ್ಞತ್ವ.

ಯತ್ಪ್ರಸಾದಾದ್ಧಿ ಯೋಗಿನಾಮಪ್ಯತೀತಾನಾಗತವಿಷಯಂ ಪ್ರತ್ಯಕ್ಷಂ ಜ್ಞಾನಮಿಚ್ಛಂತಿ ಯೋಗಶಾಸ್ತ್ರವಿದಃ, ಕಿಮು ವಕ್ತವ್ಯಂ ತಸ್ಯ ನಿತ್ಯಸಿದ್ಧಸ್ಯೇಶ್ವರಸ್ಯ ಸೃಷ್ಟಿಸ್ಥಿತಿಸಂಹೃತಿವಿಷಯಂ ನಿತ್ಯಜ್ಞಾನಂ ಭವತೀತಿ.

–ಬ್ರ.ಸೂ.ಭಾ. I, i, 5

ಯೋಗಿಗಳಿಗೆ ಭೂತ ಭವಿಷ್ಯತ್ತುಗಳಿಗೆ ಸಂಬಂಧಿಸಿದ ವಿಷಯಗಳ ಪ್ರತ್ಯಕ್ಷಜ್ಞಾನವುಂಟಾಗುವುದೂ ಕೂಡ ದೇವರ ವರಪ್ರಸಾದದಿಂದ ಎಂದು ಯೋಗಶಾಸ್ತ್ರಜ್ಞರು ಹೇಳುತ್ತಾರೆ. ಹೀಗಿರುವಾಗ ನಿತ್ಯಸಿದ್ಧನಾದ ಈಶ್ವರನಿಗೆ ಸೃಷ್ಟಿ ಸ್ಥಿತಿ ಲಯಗಳಿಗೆ ಸಂಬಂಧಿಸಿದ ನಿತ್ಯಜ್ಞಾನವಿದೆಯೆಂಬುದನ್ನು ಹೇಳಬೇಕೆ ?

## 22. ಬ್ರಹ್ಮನೇ ಜಗತ್ತಿಗೆ ಕಾರಣ.

....ಸರ್ವಜ್ಞಃ ಸರ್ವೇಶ್ವರೋ ಜಗತ ಉತ್ಪತ್ತಿಕಾರಣಂ, ಮೃತ್ಸುವರ್ಣಾದಯ ಇವ ಘಟರುಚಕಾದೀನಾಂ. ಉತ್ಪನ್ನಸ್ಯ ಜಗತಃ ನಿಯಂತೃತ್ವೇನ ಸ್ಥಿತಿಕಾರಣಂ, ಮಯಾವೀವ ಮಯಾಯಾಃ ಪ್ರಸಾರಿತಸ್ಯ ಜಗತಃ ಪುನಃ ಸ್ವಾತ್ಮನ್ಯೇವೋಪಸಂಹಾರಕಾರಣಂ, ಅವನಿರಿವ ಚತುರ್ವಿಧಸ್ಯ ಭೂತಗ್ರಾಮಸ್ಯ. ಸ ಏವ ಚ ಸರ್ವೇಷಾಂ ನ ಆತ್ಮಾ.

–ಬ್ರ.ಸೂ.ಭಾ. II, i, 1

ಮಡಕೆ ಹಾರ ಮುಂತಾದುವುಗಳಿಗೆ ಮಣ್ಣು ಚಿನ್ನ. ಇವು ಹೇಗೆ ಉತ್ಪತ್ತಿಕಾರಣವೋ ಹಾಗೆಯೇ ಸರ್ವಜ್ಞನೂ ಸರ್ವೇಶ್ವರನೂ ಆದ ಬ್ರಹ್ಮನೇ ಜಗತ್ತಿನ ಉತ್ಪತ್ತಿಗೆ ಕಾರಣನಾಗಿದ್ದಾನೆ. ಮಾಯಾವಿಯು ಮಾಯೆಯ ಸ್ಥಿತಿಗೆ ಕಾರಣನಾಗಿರುವಂತೆ ಅವನೇ ಉತ್ಪನ್ನವಾದ ಜಗತ್ತಿನ ಸ್ಥಿತಿಗೆ ಕಾರಣಕರ್ತನಾಗಿದ್ದಾನೆ. ರೂಪುಗೊಂಡ ಜಗತ್ತು ಅವನಲ್ಲಿಯೇ ಉಪಸಂಹಾರವಾಗುವುದಕ್ಕೂ ಅವನೇ ಕಾರಣ – ನಾಲ್ಕು ವಿಧವಾದ ಭೂತಗಳಲ್ಲಿ ಭೂಮಿ ಹೇಗೋ ಹಾಗೆ. ನಮ್ಮೆಲ್ಲರ ಆತ್ಮವೂ ಅವನೇ.

### 23. ಈಶ್ವರನೇ ಸಾಧಾರಣ ಕಾರಣ.

ಈಶ್ವರಸ್ತು ಪರ್ಜನ್ಯವತ್ ದ್ರಷ್ಟವ್ಯಃ. ಯಥಾ ಹಿ ಪರ್ಜನ್ಯೋವ್ರೀಹಿಯವಾದಿಸೃಷ್ಟೌ ಸಾಧಾರಣಂ ಕಾರಣಂ ಭವತಿ, ವ್ರೀಹಿಯವಾದಿವೈಷಮ್ಯೇ ತು ತತ್ತದ್ಬೀಜಗತಾನ್ಯೇವ ಅಸಾಧಾರಣಾನಿ ಸಾಮರ್ಥ್ಯಾನಿ ಕಾರಣಾನಿ ಭವನ್ತಿ, ಏವಮೀಶ್ವರೋ ದೇವಮನುಷ್ಯಾದಿಸೃಷ್ಟೌ ಸಾಧಾರಣಂ ಕಾರಣಂ ಭವತಿ. ದೇವಮನುಷ್ಯಾದಿ ವೈಷಮ್ಯೇ ತು ತತ್ತಜ್ಜೀವಗತಾನ್ಯೇವಾಸಾಧಾರಣಾನಿ ಕರ್ಮಾಣಿ ಕಾರಣಾನಿ ಭವನ್ತಿ.

–ಬ್ರ.ಸೂ.ಭಾ. II, i, 34

ಈಶ್ವರನನ್ನು ಮಳೆಗೆ ಹೋಲಿಸಬಹುದು. ಬತ್ತ ಗೋಧಿ ಮುಂತಾದುವು ಬೆಳೆಯುವುದಕ್ಕೆ ಮಳೆಯು ಸಾಧಾರಣ ಕಾರಣವಾಗಿದ್ದರೂ ಅವುಗಳ ನಡುವೆ ಇರುವ ವೈಷಮ್ಯಕ್ಕೆ ಆಯಾ ಬೀಜಗತವಾದ ಸಾಮರ್ಥ್ಯಗಳು ಅಸಾಧಾರಣ ಕಾರಣಗಳು. ಹಾಗೆಯೇ ದೇವತೆಗಳು ಮನುಷ್ಯರು ಮುಂತಾದವರ ಸೃಷ್ಟಿಗೆ ಈಶ್ವರನೇ ಸಾಧಾರಣ ಕಾರಣನಾದರೂ ಅವರ ನಡುವೆ ಇರುವ ವೈಷಮ್ಯಕ್ಕೆ ಆಯಾ ಜೀವಗತವಾದ ಕರ್ಮಗಳು ಅಸಾಧಾರಣ ಕಾರಣಗಳಾಗಿರುತ್ತವೆ.

### 24. ದೇವರ ಅವತಾರ.

ಸ ಚ ಭಗವಾನ್ ಜ್ಞಾನೈಶ್ವರ್ಯಶಕ್ತಿ ಬಲವೀರ್ಯತೇಜೋಭಿಃ ಸದಾ ಸಂಪನ್ನಃ ತ್ರಿಗುಣಾತ್ಮಿಕಾಂ ವೈಷ್ಣವೀಂ ಸ್ವಾಂ ಮಾಯಾಂ ಮೂಲಪ್ರಕೃತಿಂ ವಶೀಕೃತ್ಯ ಅಜೋ ಅವ್ಯಯೋ ಭೂತಾನಾಮೀಶ್ವರಃ ನಿತ್ಯಶುದ್ಧಬುದ್ಧಮುಕ್ತಸ್ವಭಾವೋಪಿ ಸನ್ ಸ್ವಸ್ವಮಾಯಯಾ ದೇಹವಾನಿವಜಾತ ಇವ ಲೋಕಾನುಗ್ರಹಂ ಕುರ್ವನ್ ಲಕ್ಷ್ಯತೇ, ಸ್ವಪ್ರಯೋಜನಾಭಾವೇಪಿ ಭೂತಾನುಜಿಘೃಕ್ಷಯಾ.

–ಭ.ಗೀ.ಭಾ.ಭೂಮಿಕಾ

ಜ್ಞಾನ, ಐಶ್ವರ್ಯ, ಶಕ್ತಿ, ಬಲ, ವೀರ್ಯ, ತೇಜಸ್ಸು ಮುಂತಾದುವುಗಳಿಂದ ಸದಾ ಸಂಪನ್ನನಾದ ಪರಮಾತ್ಮನು, ತ್ರಿಗುಣಾತ್ಮಕವಾದ, ಮೂಲ ಪ್ರಕೃತಿಯಾದ ಸ್ವಮಾಯೆಯನ್ನು ತನ್ನ ವಶದಲ್ಲಿಟ್ಟುಕೊಂಡಿದ್ದಾನೆ. ಆತನು ಅಭವನಾದರೂ ಅವ್ಯಯನಾದರೂ ಎಲ್ಲ ಭೂತವಸ್ತುಗಳ ಒಡೆಯನಾದರೂ ನಿತ್ಯಶುದ್ಧಬುದ್ಧಮುಕ್ತ ಸ್ವಭಾವವುಳ್ಳವನಾದರೂ ಸ್ವಮಾಯೆಯಿಂದ ಶರೀರಿಯಂತೆ, ಹುಟ್ಟಿದವನಂತೆ, ಲೋಕವನ್ನು ಅನುಗ್ರಹಿಸುತ್ತಿರುವವನಂತೆ ಕಾಣುತ್ತಾನೆ. ಸ್ವಪ್ರಯೋಜನವಿಲ್ಲದಿದ್ದರೂ ಭೂತಾನುಗ್ರಹಕ್ಕಾಗಿ ಹೀಗೆ ಮಾಡುತ್ತಾನೆ.

### 25. ಪರಮಾತ್ಮನು ಸಂಸಾರಮಾಯೆಯಿಂದ ಪ್ರಭಾವಿತನಾಗುವುದಿಲ್ಲ.

ಯಥಾ ಸ್ವಯಂ ಪ್ರಸಾರಿತಯಾ ಮಾಯಯಾ ಮಾಯಾವೀ ತ್ರಿಷ್ವಪಿ ಕಾಲೇಷು

ನ ಸಂಸ್ಪೃಶ್ಯತೇ, ಅವಸ್ತುತ್ವಾತ್, ಏವಂ ಪರಮಾತ್ಮಾಪಿ ಸಂಸಾರಮಾಯಯಾ ನ ಸಂಸ್ಪೃಶ್ಯತ ಇತಿ. ಯಥಾ ಚ ಸ್ವಪ್ನದೃಗೇಕಃ ಸ್ವಪ್ನದರ್ಶನಮಾಯಯಾ ನ ಸಂಸ್ಪೃಶ್ಯತೇ, ಪ್ರಬೋಧಸಂಪ್ರಸಾದಯೋರನನ್ವಾಗತತ್ವಾತ್. ಏವಂ ಅವಸ್ಥಾತ್ರಯಸಾಕ್ಷ್ಯೇಕೋಽವ್ಯಭಿಚಾರ್ಯವಸ್ಥಾತ್ರಯೇಣ ವ್ಯಭಿಚಾರಿಣಾ ನ ಸಂಸ್ಪೃಶ್ಯತೇ. ಮಾಯಾಮಾತ್ರಂ ಹ್ಯೇತತ್. ಯತ್ಪರಮಾತ್ಮನೋಽವಸ್ಥಾತ್ರಯಾತ್ಮನಾವಭಾಸನಂ ರಜ್ವಾ ಇವ ಸರ್ಪಾದಿಭಾವೇನೇತಿ.

–ಬ್ರ.ಸೂ.ಭಾ. II, i, 9

ಮಾಯಾವಿಯಾದವನು ತಾನೇ ನಿರ್ಮಿಸಿರುವ ಮಾಯೆಯು ವಸ್ತುವಾಗದೇ ಇರುವುದರಿಂದ ಹೇಗೆ ತ್ರಿಕಾಲಗಳಲ್ಲಿಯೂ ಅದರ ಸ್ಪರ್ಶವಿಲ್ಲದೇ ಇರುವನೋ ಹಾಗೆಯೇ ಪರಮಾತ್ಮನೂ ಸಂಸಾರದ ಮಾಯೆಯಿಂದ ಸ್ಪರ್ಶಹೊಂದದೆ ಇರುವನು. ಮತ್ತು ಸ್ವಪ್ನವನ್ನೂ ಕಾಣುವವನು ತಾನು ಒಬ್ಬನೇ ಆಗಿದ್ದು, ಜಾಗ್ರತ್ ಸುಷುಪ್ತಿಗಳಲ್ಲಿ ಆ ಕನಸು ಕಾಣಲಾಗದುದರಿಂದ ಹೇಗೆ ಸ್ವಪ್ನದರ್ಶನದ ಮಾಯೆಯ ಸಂಸ್ಪರ್ಶವಿಲ್ಲದೆ ಇರುವನೋ ಹಾಗೆಯೇ ಅವಸ್ಥಾತ್ರಯಗಳಿಗೆ ಪರಮಾತ್ಮನು ತಾನು ಒಬ್ಬನೇ ಸ್ಥಿರಸಾಕ್ಷಿಯಾಗಿರುವುದರಿಂದ ಅಸ್ಥಿರಗುಣವುಳ್ಳ ಆ ಮೂರು ಅವಸ್ಥೆಗಳ ಸಂಬಂಧವಿಲ್ಲದೆ ಇರುತ್ತಾನೆ. ಪರಮಾತ್ಮನು ಸೃಷ್ಟಿ ಸ್ಥಿತಿ ಲಯಗಳೆಂಬ ಅವಸ್ಥಾತ್ರಯರೂಪದಲ್ಲಿ ಕಾಣುತ್ತಿದ್ದಾನೆಂಬುದು ಹಗ್ಗವು ಹಾವಾಗಿ ತೋರುವಂತೆ ಮಾಯಾಮಾತ್ರವಾಗಿದೆ.

# IV. ಮಾಯೆ ಮತ್ತು ಜಗತ್ತು

## 26. ದ್ವೈತದ ಮಾಯೆ.

ಯತ್ಪರಮಾರ್ಥಸದದ್ವೈತಮ್, ಮಾಯಯಾ ಭಿದ್ಯತೇ ಹ್ಯೇತತ್ ತೈಮಿರಿಕಾನೇಕಚಂದ್ರವತ್ ರಜ್ಜುಃ ಸರ್ಪಧಾರಾದಿಭಿಃ ಭೇದೈರಿವ, ನ ಪರಮಾರ್ಥತಃ, ನಿರವಯವತ್ವಾದಾತ್ಮನಃ. ಸಾವಯವಂ ಹಿ ಅವಯವಾನ್ಯಥಾತ್ವೇನ ಭಿದ್ಯತೇ, ಯಥಾ ಮೃತ್ ಘಟಾದಿಭೇದೈಃ. ತಸ್ಮಾನ್ನಿರವಯವಮಜಂ ನಾನ್ಯಥಾ ಕಥಂಚನ ಕೇನಚಿದಪಿ ಪ್ರಕಾರೇಣ ನ ಭಿದ್ಯತ ಇತ್ಯಭಿಪ್ರಾಯಃ. ತತ್ವತೋ ಭಿದ್ಯಮಾನಂ ಹಿ ಅಮೃತಮಜಮದ್ವಯಂ ಸ್ವಭಾವತಃ ಸತ್ ಮರ್ತ್ಯತಾಂ ವ್ರಜೇತ್, ಯಥಾ ಅಗ್ನಿಃ ಶೀತತಾಂ. ತಚ್ಚಾನಿಷ್ಟಂ ಸ್ವಭಾವವೈಪರೀತ್ಯಗಮನಂ, ಸರ್ವಪ್ರಮಾಣವಿರೋಧಾತ್. ಅಜಮದ್ವಯಮಾತ್ಮತತ್ವಂ ಮಾಯಯೈವ ಭಿದ್ಯತೇ, ನ ಪರಮಾರ್ಥತಃ. ತಸ್ಮಾನ್ನ ಪರಮಾರ್ಥಸದ್‌ದ್ವೈತಂ.

–ಮಾ.ಕಾ.ಭಾ. iii, 19

ಪರಮಾರ್ಥಸತ್ಯವು ಅದ್ವೈತವಾದುದು. ದೃಷ್ಟಿದೋಷದಿಂದ ಚಂದ್ರನು ಅನೇಕವಾಗಿರುವಂತೆ ಕಾಣುವಹಾಗೆ, ಹಗ್ಗವು ಸರ್ಪ, ನೀರಿನ ಧಾರೆ ಮುಂತಾಗಿ ಕಾಣುವಂತೆ ಆ ಪರಮಾರ್ಥವು ಮಾಯೆಯಿಂದ ಬೇರಬೇರೆಯಾಗಿ ಕಾಣುತ್ತದೆ. ಆದರೆ ಅದು ಸತ್ಯವಲ್ಲ. ಏಕೆಂದರೆ ಆತ್ಮವು ನಿರವಯವವಾದುದು. ಮಣ್ಣು ಮಡಕೆಯಿಂದ ಬೇರೆಯಾಗಿ ತೋರುವಂತೆ ಅವಯವರಹಿತವಾಗಿದ್ದರೂ ಅವಯವಸಹಿತವಾಗಿರುವಂತೆ ಅದು ಕಾಣಬರುತ್ತದೆ. ಆದುದರಿಂದ ನಿರವಯವವಾದ, ಜನ್ಮವಿಲ್ಲದಿರುವ ಸತ್ಯವು ಬೇರೆಯಾಗುವುದು ಅಸಾಧ್ಯ. ಇದೇ ಅರ್ಥ. ಶಾಶ್ವತವೂ ಅಜವು ಅದ್ವೈತವೂ ಆದ ಸತ್ಯವು ಬೇರೆಬೇರೆಯಾಗುವುದಾದರೆ ಅದು ನಶ್ವರವಾಗುತ್ತದೆ– ಅಗ್ನಿಯು ತಂಪಾಗುವಂತೆ .... ಸ್ವಭಾವಕ್ಕೆ ಎದುರಾಗಿರುವುದು ಎಲ್ಲ ಪ್ರಮಾಣಗಳಿಗೂ ವಿರುದ್ಧವಾದುದರಿಂದ ಅದನ್ನು ಒಪ್ಪಲಾಗುವುದಿಲ್ಲ. ಜನ್ಮವಿಲ್ಲದ ಅದ್ವೈತವಾದ ಆತ್ಮವು ಮಾಯೆಯಿಂದ ಮಾತ್ರ ಬೇರೆಯಾಗಿ ಕಾಣುತ್ತದೆ; ವಸ್ತುತಃ ಅಲ್ಲ. ಆದುದರಿಂದ ದ್ವೈತವು ಪರಮಾರ್ಥ ಸತ್ಯವಲ್ಲ.

## 27. ಮಾಯೆಯು ಐಂದ್ರಜಾಲಿಕ ಶಕ್ತಿ.

ಯದಿ ಆತ್ಮೈಕ ಏವೇತಿ ನಿಶ್ಚಯಃ, ಕಥಂ ಪ್ರಾಣಾದಿಭಿಃ ಅನಂತೈರ್ಭಾವೈಃ, ಏತೈಃ ಸಂಸಾರಲಕ್ಷಣೈರ್ವಿಕಲ್ಪಿತ ಇತಿ? ಉಚ್ಯತೇ ಶೃಣುಮಾಯೈಷ ತಸ್ಮಾತ್ಮನೋ ದೇವಸ್ಯ. ಯಥಾ ಮಾಯಾವಿನಾ ವಿಹಿತಾಮಾಯಾ ಗಗನಮತಿವಿಮಲಂ ಕುಸುಮಿತೈಃ ಸಪಲಾಶೈಃ. ತರುಭಿರಾಕೀರ್ಣಮಿವ ಕರೋತಿ, ತಥಾ ಇಯಮಪಿ ದೇವಸ್ಯ ಮಾಯಾ, ಯಯಾ ಅಯಂ ಸ್ವಯಮಪಿ ಮೋಹಿತ ಇವ ಮೋಹಿತೋ ಭವತಿ.

–ಮಾ.ಕಾ.ಭಾ. ii, 19

ಆತ್ಮವು ಒಂದೇ ಎಂದು ನಿಶ್ಚಯವಾದರೆ, ಸಂಸಾರಲಕ್ಷಣಗಳಿಂದ ಕೂಡಿರುವ ಪ್ರಾಣವೇ ಮುಂತಾದ ಅನೇಕ ಭಾವಗಳಿಂದ ಕಲ್ಪಿತವಾಗಿರುವುದೇಕೆ ? ಅದಕ್ಕೆ ಉತ್ತರವನ್ನು ಕೇಳಿ : ಇದು ಪ್ರಕಾಶವಾದ ಆತ್ಮನ ಮಾಯೆ. ಐಂದ್ರಜಾಲಿಕನು ಮಾಯೆಯಿಂದ ಅತಿ ನಿರ್ಮಲವಾದ ಆಕಾಶವು ಕುಸುಮಿತ ಪಲಾಶವೃಕ್ಷಗಳಿಂದ ತುಂಬಿರುವಂತೆ ಹೇಗೆ ಮಾಡುತ್ತಾನೋ ಅದೇ ರೀತಿಯಲ್ಲಿ ದೇವನ ಮಾಯೆಯು ತನ್ನನ್ನೇ ಮೋಹಿತವಾದಂತೆ ಮಾಡಿಕೊಳ್ಳುತ್ತದೆ.

## 28. ಮಾಯೆಯ ಶಕ್ತಿ.

ಅವಿದ್ಯಾತ್ಮಿಕಾ ಬೀಜಶಕ್ತಿಃ ಅವ್ಯಕ್ತಶಬ್ದನಿರ್ದೇಶ್ಯಾ ಪರಮೇಶ್ವರಾಶ್ರಯಾ ಮಾಯಾಮಯೀ ಮಹಾಸುಷುಪ್ತಿಃ, ಯಸ್ಯಾಂ ಸ್ವರೂಪಪ್ರತಿಬೋಧರಹಿತಾಃ ಶೇರತೇ ಸಂಸಾರಿಣೋ ಜೀವಾಃ... ...ಅವ್ಯಕ್ತಾ ಹಿ ಸಾ ಮಾಯಾ, ತತ್ವಾನ್ಯತ್ವನಿರೂಪಣಸ್ಯಾಥಾಶಕ್ಯತ್ವಾತ್.

–ಬ್ರ. ಸೂ. ಭಾ. I, iv, 3

(ಸೃಷ್ಟಿಗೆ ಕಾರಣವಾದ) ಬೀಜಶಕ್ತಿಯು ಅವಿದ್ಯಾತ್ಮಿಕವಾದುದು. 'ಅವ್ಯಕ್ತ' ಎಂಬ ಪದದಿಂದ ಅದನ್ನು ಕರೆಯುತ್ತಾರೆ. ಅದು ಪರಮೇಶ್ವರನಲ್ಲಿ ಆಶ್ರಯವನ್ನು ಪಡೆದಿದೆ, ಅದು ಮಾಯಾಮಯವಾದುದು, ಮಹಾಸುಷುಪ್ತಿಯಾದುದು, ಅದರಲ್ಲಿ ಸಂಸಾರಿಗಳಾದ ಜೀವಗಳು ಆತ್ಮಜ್ಞಾನರಹಿತವಾಗಿ ಮಲಗಿರುತ್ತವೆ.

ಆ ಮಾಯೆಯು ಅವ್ಯಕ್ತವಾದುದು, ಏಕೆಂದರೆ ಅದನ್ನು ಸತ್ಯವೆಂದಾಗಲಿ ಅಸತ್ಯವೆಂದಾಗಲಿ ನಿರೂಪಿಸುವುದು ಅಸಾಧ್ಯ.

## 29. ಇಲ್ಲದಿರುವುದೇ ಮಾಯೆ.

ಸ ಚ ಮಾಯಾ ನ ವಿದ್ಯತೇ. ಮಾಯೇತ್ಯವಿದ್ಯಮಾನಸ್ಯಾಖ್ಯಾ.

–ಮಾ. ಕಾ. ಭಾ. iv, 58

ಇಲ್ಲದಿರುವುದೇ ಮಾಯೆ. ಇಲ್ಲದಿರುವುದರ ಹೆಸರು ಮಾಯೆ.

## 30. ಭೇದವು ಸತ್ಯವಾದುದಲ್ಲ.

ಭೇದಸ್ತು ಉಪಾಧಿನಿಮಿತ್ತೋ ಮಿಥ್ಯಾಜ್ಞಾನಕಲ್ಪಿತೋ ನ ಪಾರಮಾರ್ಥಿಕಃ

–ಬ್ರ. ಸೂ. ಭಾ. I, iv, 10

ಉಪಾಧಿಗಳು ಭೇದವನ್ನುಂಟುಮಾಡುತ್ತವೆ. ಅದು ಮಿಥ್ಯಾಜ್ಞಾನದಿಂದುಂಟಾದುವು. ಅದು ಪರಮಸತ್ಯವಲ್ಲ.

## 31. ಸೃಷ್ಟಿಯನ್ನು ಸೂತ್ರಪ್ರಸಾರವೆಂಬ ಇಂದ್ರಜಾಲಕ್ಕೆ ಹೋಲಿಸಬಹುದು.

ವಿಭೂತಿರ್ವಿಸ್ತಾರ ಈಶ್ವರಸ್ಯ ಸೃಷ್ಟಿರಿತಿ ಸೃಷ್ಟಿಚಿಂತಕಾಃ ಮನ್ಯಂತೇ, ನ ತು ಪರಮಾರ್ಥಚಿಂತಕಾನಾಂ ಸೃಷ್ಟಾವಾದರಃ... ..ನ ಹಿ ಮಾಯಾವಿನಂ ಸೂತ್ರಮಾಕಾಶೇ ನಿಕ್ಷಿಪ್ಯ ತೇನ ಸಾಯುಧಮಾರುಹ್ಯ ಚಕ್ಷುರ್ಗೋಚರತಾಂ ಅತೀತ್ಯ ಯುದ್ಧೇನ ಖಂಡಶಃ ಛಿನ್ನಂ ಪತಿತಂ ಪುನರುತ್ಥಿತಂ ಚ ದೃಶ್ಯತಾಂ ತತ್ಕೃತಮಾಯಾದಿಸತತ್ವ ಚಿಂತಾಯಾಂ ಆದರೋ ಭವತಿ. ತಥೈವಾಯಂ ಮಾಯಾವಿನಃ ಸೂತ್ರಪ್ರಸಾರಣಸಮಃ ಸುಷುಪ್ತಸ್ವಪ್ನಾದಿವಿಕಾಸಃ, ತದಾರೂಢಮಾಯಾವಿಸಮಶ್ಚ ತತ್ಸ್ಥಃ ಪ್ರಾಜ್ಞತೈಜಸಾದಿಃ, ಸೂತ್ರತದಾರೂಢಾಭ್ಯಾಮನ್ಯಃ ಪರಮಾರ್ಥಮಾಯಾವೀ. ಸ ಏವ ಭೂಮಿಷ್ಠಾ ಮಾಯಾಚ್ಛನ್ನೋಽದೃಶ್ಯಮಾನ ಏವ ಸ್ಥಿತೋ ಯಥಾ ತಥಾ ತುರೀಯಾಖ್ಯಂ ಪರಮಾರ್ಥತತ್ವಂ. ಅತಸ್ತಚ್ಚಿಂತಾಯಾಮೇವಾದರೋ ಮುಮುಕ್ಷೂಣಾಮಾರ್ಯಾಣಾಂ, ನ ನಿಷ್ಪ್ರಯೋಜನಾಯಾಂ ಸೃಷ್ಟಾವಾದರ ಇತಿ.

–ಮಾ. ಕಾ. ಬಾ. I, 7

ಸೃಷ್ಟಿಯನ್ನು ಕುರಿತು ಚಿಂತಿಸುವವರು ಸೃಷ್ಟಿಯು ಈಶ್ವರನ ವಿಭೂತಿ ವಿಸ್ತಾರವೆಂದು ತಿಳಿಯುತ್ತಾರೆ. ಪರಮಾರ್ಥವನ್ನು ಕುರಿತು ಚಿಂತಿಸುವವರು ಮಾತ್ರ ಸೃಷ್ಟಿಯನ್ನು ಕುರಿತ ಈ ಚಿಂತನೆಯಲ್ಲಿ ಆದರವನ್ನಿಟ್ಟಿಲ್ಲ. ಒಬ್ಬ ಐಂದ್ರಜಾಲಿಕನು ಒಂದು ಹಗ್ಗವನ್ನು ಆಕಾಶದ ಕಡೆಗೆ ಎಸೆದು ಸಶಸ್ತ್ರನಾಗಿ ಆ ಹಗ್ಗವನ್ನು

ಹತ್ತಿಕೊಂಡುಹೋಗಿ ಕಣ್ಣಿಗೆ ಕಾಣದಷ್ಟು ಎತ್ತರ ಏರಿ, ಅಲ್ಲಿ ಕಾಳಗದಲ್ಲಿ ಚೂರುಚೂರಾಗಿ ಖಂಡಿಸಲ್ಪಟ್ಟು, ಕೆಳಗೆ ಬಿದ್ದು ಮತ್ತೆ ಮೇಲೇಳಬಹುದು. ಆತನು ಮಾಡುವ ಆ ಇಂದ್ರಜಾಲದಲ್ಲಿ ಸತ್ಯವಿದೆಯೆಂದು ಯಾರೂ ನಂಬುವುದಿಲ್ಲ. ಹಗ್ಗವನ್ನು ಮೇಲಕ್ಕೆಸೆಯುವ ಐಂದ್ರಜಾಲಿಕನ ಮಾಯೆಯಂತೆಯೇ ನಿದ್ದೆಯಲ್ಲಿ ಕಾಣುವ ಸ್ವಪ್ನ ಮುಂತಾದುವು. ಹಗ್ಗವನ್ನು ಹತ್ತುವ ಐಂದ್ರಜಾಲಿಕನಂತೆ ಅನುಭವ ಸಮಯದಲ್ಲಿರುವ ಪ್ರಾಜ್ಞ, ತೈಜಸ ಮುಂತಾದುವುಗಳು. ಹಗ್ಗಕ್ಕಿಂತ ಬೇರೆಯಾಗಿ ಹಗ್ಗ ಹತ್ತುವವನಿಗಿಂತ ಬೇರೆಯಾಗಿ ನಿಜವಾದ ಐಂದ್ರಜಾಲಿಕನಿರುತ್ತಾನೆ. ಅವನು ತನ್ನ ಮಾಯೆಯಲ್ಲಿ ಮುಳುಗಿ ಯಾರಿಗೂ ಕಾಣದ ಭೂಮಿಯಮೇಲೆಯೇ ಇರುತ್ತಾನೆ. ಅವನ ಹಾಗೆಯೇ ತುರೀಯವೆಂದು ಕರೆಯಲ್ಪಡುವ ಪರಮಸತ್ಯವಿರುತ್ತದೆ. ಆದುದರಿಂದ ಆರ್ಯರಾದ ಮುಮುಕ್ಷುಗಳು ಆ ಪರಮಸತ್ಯದ ಚಿಂತೆಯಲ್ಲಿ ಮಾತ್ರ ಆದರಣೆಯುಳ್ಳವರಾಗಿರುತ್ತಾರೆ. ಸೃಷ್ಟಿಚಿಂತನೆಯೆಂಬುದು ವ್ಯರ್ಥ ವಾದುದರಿಂದ ಅದರಲ್ಲಿ ಯಾವ ಆದರವನ್ನೂ ಹೊಂದಿರುವುದಿಲ್ಲ.

## 32. ಪ್ರಪಂಚವೇ ಮಾಯೆ.

ನ ಹಿ ರಜ್ಜ್ವಾಂ ಭ್ರಾಂತಿಬುದ್ಧ್ಯಾ ಕಲ್ಪಿತಃ ಸರ್ಪೋ ವಿದ್ಯಮಾನಃ ಸನ್ವಿವೇಕತೋ ನಿವೃತ್ತಃ, ನ ಚ ಮಾಯಾ ಮಯಾವಿನಾ ಪ್ರಯುಕ್ತಾ ತದ್ದರ್ಶಿನಾಂ ಚಕ್ಷುರ್ಬಂಧಾಪಗಮೇ ವಿದ್ಯಮಾನಾ ಸತಿ ನಿವೃತ್ತಾ, ತಥೇದಂ ಪ್ರಪಂಚಾಖ್ಯಂ ಮಾಯಾಮಾತ್ರಂ ದ್ವೈತಂ, ರಜ್ಜುವನ್ಮಾಯಾವಿವಚ್ಚ ಅದ್ವೈತಂ ಪರಮಾರ್ಥತಃ ತಸ್ಮಾನ್ನ ಕಶ್ಚಿತ್ಪ್ರಪಂಚಃ ಪ್ರವೃತ್ತೋ ನಿವೃತ್ತೋ ವಾಽಸ್ತಿ.

–ಮಾ. ಕಾ. ಭಾ. i, 17

ಭ್ರಾಂತಿಬುದ್ಧಿಯಿಂದ ಹಗ್ಗವಿರುವ ಕಡೆ ಕಲ್ಪಿತವಾದ ಸರ್ಪವು ನಿಜವಾಗಿ ಇದ್ದು ವಿವೇಕದ ಸಹಾಯದಿಂದ ಅದನ್ನು ನಿವೃತ್ತಿಮಾಡಿದಂತಲ್ಲ. ಐಂದ್ರಜಾಲಿಕನು ನಿರ್ಮಿಸಿದ ಇಂದ್ರಜಾಲವು ವಸ್ತುತಃ ಇದ್ದು ಅದನ್ನು ನೋಡುತ್ತಿದ್ದವರ ಕಣ್ಣುಗಳ ದೋಷವು ನಾಶವಾದಮೇಲೆ ಅದು ನಾಶವಾದಂತೆಯೂ ಅಲ್ಲ. ಹಾಗೆಯೇ, ಇಲ್ಲಿ ಪ್ರಪಂಚವೆಂದು ಕರೆಯುವ ದ್ವೈತವು ಮಾಯಾಮಾತ್ರವಾದುದು. ಹಗ್ಗದಂತೆಯೂ ಐಂದ್ರಜಾಲಿಕನಂತೆಯೂ ಇರುವ ಅದ್ವೈತವೇ ಪರಮಸತ್ಯ. ಆದುದರಿಂದ ಪ್ರವೃತ್ತವಾದ ಪ್ರಪಂಚವಾಗಲಿ ನಿವೃತ್ತವಾದ ಪ್ರಪಂಚವಾಗಲಿ ಇಲ್ಲ.

## 33. ಪ್ರಪಂಚವು ಅಸತ್ಯವಾದುದು.

ಯಥಾ ಚ ಪ್ರಸಾರಿತಪಣ್ಯಾಪಣಗೃಹಪ್ರಾಸಾದಸ್ತ್ರೀಪುಂಜನಪದವ್ಯವಹಾರಾಕೀರ್ಣ ಮಿವ ಗಂಧರ್ವನಗರಂ ದೃಶ್ಯಮಾನಮೇವ ಸತ್ ಅಕಸ್ಮಾದಭಾವತಾಂ ಗತಂ ದೃಷ್ಟಂ, ಯಥಾ ಚ ಸ್ವಪ್ನಮಾಯೇ ದೃಷ್ಟೇ ಅಸದ್ರೂಪೇ, ತಥಾ ವಿಶ್ವಮಿದಂ ದ್ವೈತಮಸದ್ ದೃಷ್ಟಂ.

–ಮಾ. ಕಾ. ಭಾ. ii, 31

ಮಾರಾಟಕ್ಕಿಟ್ಟಿರುವ ಅನೇಕ ಪದಾರ್ಥಗಳುಳ್ಳ ಅಂಗಡಿಗಳಿಂದಲೂ, ಮನೆಗಳಿಂದಲೂ, ಅರಮನೆಗಳಿಂದಲೂ, ಸ್ತ್ರೀಪುರುಷರಿಂದ ತುಂಬಿದ ಹಳ್ಳಿಗಳಿಂದಲೂ ಕೂಡಿ ಇರುವ ಗಂಧರ್ವನಗರಿಯೆಂದು ನಿಜವಾಗಿದ್ದಂತೆ ಕಂಡುಬಂದರೂ ತತ್‌ಕ್ಷಣ ಅದು ಅಗೋಚರವಾಗುವಂತೆ, ಸ್ವಪ್ನ ಭ್ರಮೆಗಳೆಂಬಂತೆ ಕಾಣುವಂತೆ, ಈ ಎಲ್ಲ ದ್ವೈತಪ್ರಪಂಚವೂ ಸಂಪೂರ್ಣವಾಗಿ ಅಸತ್ಯವಾಗಿರುವುದು ಕಂಡುಬರುತ್ತದೆ.

## 34. ದ್ವೈತವು ಅಸತ್ಯ.

ಉಪಲಭ್ಯತೇ ಹಿ ಮಾಯಾಹಸ್ತೀ ಹಸ್ತೀವ, ಹಸ್ತಿನಮಿವಾತ್ರ ಸಮಾಚಾರನ್ತಿ ಬಂಧನಾರೋಹಣಾದಿ ಹಸ್ತಿಸಂಬಂಧಿಭಿರ್ಧರ್ಮ್ಯೈಃ, ಹಸ್ತೀತಿ ಚೋಚ್ಯತೇ ಅಸನ್ನಪಿ ಯಥಾ, ತಥೈವೋಪಲಂಭಾತ್ ಸಮಾಚಾರಾತ್ ದ್ವೈತಂ ಭೇಧರೂಪಮಸ್ತಿ ವಸ್ತು ಇತಿ ಉಚ್ಯತೇ. ತಸ್ಮಾನ್ನೋಪಾಲಂಭಸಮಾಚಾರೌ ದ್ವೈತವಸ್ತುಸದ್ಭಾವೇ ಹೇತೂ ಭವತ ಇತ್ಯಭಿಪ್ರಾಯಃ.

–ಮಾ. ಕಾ. ಭಾ. iv, 44

ಮಾಯಾಗಜವು ನಿಜವಾದ ಗಜವೆಂದೇ ಕಣ್ಣಿಗೆ ಕಾಣುತ್ತದೆ. ಹಾಗೆಯೇ ಗಜಕ್ಕೆ ಸಂಬಂಧಿಸಿದ ಧರ್ಮಗಳಾದ ಬಂಧನ, ರೋಹಣ ಮುಂತಾದ ಕ್ರಿಯೆಗಳೊಡನೆ ವ್ಯವಹಾರವನ್ನು ಪಡೆಯುತ್ತದೆ. ಅದು ನಿಜವಾದ ಗಜವಲ್ಲದಿದ್ದರೂ ಗಜವೆಂದೇ ಕರೆಯಲ್ಪಡುತ್ತದೆ. ಹಾಗೆಯೇ ಭೇದರೂಪವಾದ ದ್ವೈತವು ಸಹ. ಏಕೆಂದರೆ, ಅದು ಕಣ್ಣಿಗೆ ಕಾಣುತ್ತದೆ, ವ್ಯವಹಾರಕ್ಕೆ ಸಿಕ್ಕುತ್ತದೆ ಎಂದು ಹೇಳುತ್ತಾರೆ. ಆದುದರಿಂದ ಕಾಣ್ಕೆ ಮತ್ತು ಆಚಾರ ಇವು ದ್ವೈತದ ಸತ್ಯಾಂಶಸ್ಥಾಪನೆಗೆ ಕಾರಣಗಳಾಗಲಾರವು.

## 35. ಬ್ರಹ್ಮನಿಗಿಂತ ಬೇರೆಯಾದ ಪ್ರಪಂಚದ ಸತ್ಯವಿಲ್ಲ.

ಯಥಾ ಘಟಕರಕಾದ್ಯಾಕಾಶಾನಾಂ ಮಹಾಕಾಶಾದನನ್ಯತ್ವಂ, ಯಥಾ ಚ ಮೃಗತೃಷ್ಣಿಕೋದಕಾದೀನಾಂ ಊಷರಾದಿಭ್ಯೋಽನನ್ಯತ್ವಂ, ದೃಷ್ಟನಷ್ಟಸ್ವರೂಪತ್ವಾತ್ ಸ್ವರೂಪೇಣಾನುಪಾಖ್ಯತ್ವಾತ್, ಏವಮಸ್ಯ ಭೋಗ್ಯಭೋಕ್ತ್ರಾದಿಪ್ರಪಂಚಜಾತಸ್ಯ ಬ್ರಹ್ಮವ್ಯತಿರೇಕೇಣಾಭಾವಃ.

-ಬ್ರ. ಸೂ. ಭಾ. II, i, 14

ಘಟದೊಳಗಿನ ಆಕಾಶ, ಪಾತ್ರೆಯೊಳಗಿನ ಆಕಾಶ ಮುಂತಾದುವು ಮಹಾಕಾಶದಿಂದ ಹೇಗೆ ಬೇರೆಯಲ್ಲವೋ, ಮರೀಚಿಕೆಯ ನೀರು ಮರಳು ಕಾಡಿನ ಮರಳಿನಿಂದ ಬೇರೆಯಲ್ಲವೋ, ಅವು ಕಣ್ಣಿಗೆ ಕಂಡರೂ ಬಳಿಕ ನಷ್ಟವಾಗುವ ಸ್ವರೂಪವುಳ್ಳವುಗಳೋ, ಅವುಗಳ ಸ್ವರೂಪವನ್ನು ನಿರೂಪಿಸಲು ಸಾಧ್ಯವಿಲ್ಲವೋ ಹಾಗೆಯೇ ಭೋಗ್ಯ ಭೋಕ್ತೃ ಮುಂತಾದುವುಗಳಿಂದ ಕೂಡಿರುವ ಒಟ್ಟು ಪ್ರಪಂಚವು ಬ್ರಹ್ಮನಿಂದ ಬೇರೆಯಾದ ಸ್ಥಿತಿ ಇಲ್ಲ.

## 36. ಪ್ರಪಂಚದ ವೈತಥ್ಯಕ್ಕೆ ಅಡ್ಡಿ.

ಜಾಗ್ರದ್‌ದೃಶ್ಯಾನಾಂ ಭಾವಾನಾಂ ವೈತಥ್ಯಮಿತಿಪ್ರತಿಜ್ಞಾ. ದೃಶ್ಯತ್ವಾದಿತಿ ಹೇತುಃ ಸ್ವಪ್ನದೃಶ್ಯ ಭಾವವದಿತಿ ದೃಷ್ಟಾಂತಃ. ಯಥಾ ತತ್ರ ಸ್ವಪ್ನೇ ದೃಶ್ಯಾನಾಂ ಭಾವಾನಾಂ ವೈತಥ್ಯಂ. ತಥಾ ಜಾಗರಿತೇಽಪಿ ದೃಶ್ಯತ್ವಮವಿಶಿಷ್ಟಮಿತಿ ಹೇತೂಪನಯಃ. ತಸ್ಮಾಜ್ಜಾಗರಿತೇಽಪಿ ವೈತಥ್ಯಂ ಸ್ಮೃತಮಿತಿ ನಿಗಮನಂ. ಅಂತಸ್ಥಾನಾತ್ಸಂವೃತತ್ವೇನ ಚ ಸ್ವಪ್ನದೃಶ್ಯಾನಾಂ ಭಾವಾನಾಂ ಜಾಗ್ರದ್‌ದೃಶ್ಯೇಭ್ಯೋ ಭೇದಃ, ದೃಶ್ಯತ್ವಮಸತ್ಯತ್ವಂ ಚಾವಿಶಿಷ್ಟಮುಭಯತ್ರ.

–ಮಾ. ಕಾ. ಭಾ. ii, 4

ಜಾಗ್ರತ್ ಸ್ಥಿತಿಯಲ್ಲಿ ನೋಡುವ ದೃಶ್ಯಗಳು ವಿತಥವಾದವು. ಇದು 'ಪ್ರತಿಜ್ಞಾ'. ಅವುಗಳನ್ನು ಕಾಣುವುದು ಸಾಧ್ಯವಾದುದರಿಂದ ಎಂಬುದು 'ಹೇತು'. ಸ್ವಪ್ನದಲ್ಲಿ ಕಂಡ ದೃಶ್ಯಗಳಂತೆ ಎಂಬುದು 'ದೃಷ್ಟಾಂತ'. ಸ್ವಪ್ನದಲ್ಲಿ ಕಂಡವಸ್ತುಗಳು ಭ್ರಮೆಯಿಂದುಂಟಾದುವು ಹೇಗೋ ಹಾಗೆ ಜಾಗ್ರತ್ ಸ್ಥಿತಿಯಲ್ಲಿಯೂ 'ಕಾಣುವಂತಿರುವುದು' ಎಂಬುದು ಸಾಧಾರಣವಾದುದು. 'ಇದು ಉಪನಯ'. ಆದುದರಿಂದ ಜಾಗ್ರತ್‌ಸ್ಥಿತಿಯಲ್ಲಿಯೂ ವೈತಥ್ಯವಿದೆಯೆನ್ನುವುದು 'ನಿಗಮನ'. ಸ್ವಪ್ನದೃಶ್ಯಗಳಿಗೂ ಜಾಗ್ರದ್ ದೃಶ್ಯಗಳಿಗೂ ಭೇದವಿದೆ. ಏಕೆಂದರೆ ಜಾಗ್ರದ್‌ದೃಶ್ಯಗಳು ಒಂದು ಸ್ಥಾನದ ಒಳಗಡೆಯಿವೆ ಮತ್ತು ಆಕಾಶದಿಂದ ಪರಿವೃತವಾಗಿವೆ. ಆದರೆ ಎರಡಕ್ಕೂ ದೃಶ್ಯತ್ವ ಮತ್ತು ಅಸತ್ಯತ್ವ ಎಂಬುದು ಸಾಧಾರಣ.

## 37. ಪ್ರಪಂಚವು ಭ್ರಮೆಯೆಂಬುದಕ್ಕೆ ಕಾರಣ.

ಇತಶ್ಚ ವೈತಥ್ಯ ಜಾಗ್ರದ್‌ದೃಶ್ಯಾನಾಂ ಭೇದಾನಾಮ್, ಅದ್ಯಂತಯೋರಭವಾತ್. ಯದಾದಾವಂತೇ ಚ ನಾಸ್ತಿ ವಸ್ತು ಮೃಗತೃಷ್ಣಿಕಾದಿ, ತನ್ಮಧ್ಯೇಽಪಿ ನಾಸ್ತೀತಿ ನಿಶ್ಚಿತಂ ಲೋಕೇ. ತಥೇಮೇ ಜಾಗ್ರದ್‌ದೃಶ್ಯಾಭೇದಾಃ ಆದ್ಯಂತಯೋರಭಾವಾತ್ ವಿತಥೈರೇವ ಮೃಗತೃಷ್ಣಿಕಾದಿಭಿಃ ಸದೃಶದ್ವಾದ್ವಿತಥಾ ಏವ, ತಥಾಪಿ ಅವಿತಥಾ ಇವ ಲಕ್ಷಿತಾ ಮೂಢೈರನಾತ್ಮವಿದ್ಭಿಃ

–ಮಾ. ಕಾ. ಭಾ. ii, 6

ಜಾಗ್ರದ್‌ದೃಶ್ಯಗಳು ಭ್ರಮೆಯೆನ್ನುವುದಕ್ಕೆ ಇನ್ನೂ ಒಂದು ಕಾರಣವಿದೆ. ಅವು ಮೊದಲಾಗಲಿ ಆಬಳಿಕಲಾಗಲಿ ಇರುವುದಿಲ್ಲ. ಯಾವುದು ಮೊದಲಲ್ಲಾಗಲಿ ಕೊನೆಯಲ್ಲಾಗಲಿ ಇಲ್ಲವೋ ಅವು, ಉದಾಹರಣೆಗೆ ಮರೀಚಿಕೆ ಮುಂತಾದುವು ಮಧ್ಯದಲ್ಲಿಯೂ ಇಲ್ಲ. ಇದು ವಿಶ್ವದಲ್ಲಿ ನಿಶ್ಚಿತವಾಗಿದೆ. ಆದುದರಿಂದ ಜಾಗ್ರದವಸ್ಥೆಯಲ್ಲಿ ಕಾಣುವ ದೃಶ್ಯಗಳು, ಮೃಗತೃಷ್ಣಿಕಾದಿಗಳಂತೆ ಆದಿ ಅಂತ್ಯಗಳಲ್ಲಿ ಇಲ್ಲದಿರುವುದರಿಂದ, ಭ್ರಮಾಪೂರ್ಣವಾದುವು. ಹೀಗಿದ್ದರೂ ಆತ್ಮವನ್ನು ಅರಿಯದ ಮೂಢರಿಂದ ಅವೇ ಸತ್ಯವೆಂದು ವ್ಯವಹರಿಸಲ್ಪಡುತ್ತವೆ.

## 38. ಸೃಷ್ಟಿ ವಿಷಯವನ್ನು ತಿಳಿಸುವ ಗ್ರಂಥಭಾಗಗಳು.

ಮೃಲ್ಲೋಹವಿಸ್ಫುಲಿಂಗಾದಿದೃಷ್ಟಾಂತೋಪನ್ಯಾಸೈಃ, ಸೃಷ್ಟಿಃ ಯಾ ಚ ಉದಿತಾ ಪ್ರಕಾಶಿತಾ ಕಲ್ಪಿತಾ ಅನ್ಯಥಾನ್ಯಥಾ ಚ, ಸಸರ್ವಃ ಸೃಷ್ಟಿ ಪ್ರಕಾರೋ ಜೀವಪರಮಾತ್ಮೈಕತ್ವಬುಧ್ಯವತಾರಯೋಪಾಯೋಽಸ್ಮಾಕಂ, ಯಥಾ ಪ್ರಾಣಸಂವಾದೇ ವಾಗಾದ್ಯಾಸುರಪಾಪ್ಮವೇಧಾದ್ಯಾಖ್ಯಾಯಿಕಾ ಕಲ್ಪಿತಾ ಪ್ರಾಣವೈಶಿಷ್ಟ್ಯಬೋಧಾವ ತಾರಾಯ.... ಶಾಖಾಭೇದೇಷು ಅನ್ಯಥಾನ್ಯಥಾಚ ಪ್ರಾಣಾದಿಸಂವಾದಶ್ರವಣಾತ್. ಯದಿ ಹಿ ವಾದಃ ಪರಮಾರ್ಥಏವಾಭೂತ್, ಏಕರೂಪ ಏವ ಸಂವಾದಃ ಸರ್ವಶಾಖಾಸ್ವಶ್ರೋಷ್ಯತ, ವಿರುದ್ಧಾನೇಕಪ್ರಕಾರೇಣ ನಾಶ್ರೋಷ್ಯತ. ಶ್ರೂಯತೇ ತು. ತಸ್ಮಾನ್ನ ತಾದರ್ಥ್ಯಸಂವಾದಶ್ರುತೀನಾಮ್... ತಸ್ಮಾದುತ್ಪತ್ತ್ಯಾದಿ ಶ್ರುತಯ ಆತ್ಮೈಕತ್ವಬುದ್ಧ್ಯವತಾರಯೈವ.

–ಮಾ. ಕಾ. ಭಾ. iii, 15

ಶ್ರುತಿಗಳಲ್ಲಿ ಮಣ್ಣು, ಲೋಹ, ಕಿಡಿ ಮುಂತಾದ ದೃಷ್ಟಾಂತಗಳ ಮೂಲಕ ಸೃಷ್ಟಿಯನ್ನು ಕುರಿತು ಏನು ಹೇಳಿದ್ದಾರೆಯೋ–ಆ ಎಲ್ಲ ಸೃಷ್ಟಿಮಾರ್ಗ ವಿವರಣೆಯೂ ನಮ್ಮಲ್ಲಿ ಜೀವಾತ್ಮ ಪರಮಾತ್ಮಗಳ ಏಕತ್ವ ಬುದ್ಧಿಯನ್ನು ಉತ್ಪಾದನೆ ಮಾಡುವುದಕ್ಕೆ ಉಪಯೋಗಿಸಿರುವ ಮಾರ್ಗ. 'ಪ್ರಾಣ'ದ ವೈಶಿಷ್ಟ್ಯದ ಬೋಧನೆಗೆ ಪೀಠಿಕೆಯಾಗಿರುವ 'ಪ್ರಾಣ ಸಂವಾದ'ದಲ್ಲಿ ಅಸುರಶಕ್ತಿಗಳು ವಾಕ್‌ನಿರ್ಮಾಣಾಂಗಗಳನ್ನು ಕೆಡುಕಿನಿಂದ ತುಂಬುತ್ತವೆ ಎಂಬುದಾಗಿ ಹೇಳಿರುವ ಕಥೆಗಳಂತೆಯೇ ಇದೂ!... ಪ್ರಾಣಸಂಬಂಧಿಯಾದ ಇತರ ಶಾಖೆಗಳಲ್ಲಿ ಈ ಕಥೆಯು ಬೇರಬೇರೆಯಾಗಿ ಹೇಳಲ್ಪಟ್ಟಿದೆ. ಈಕಥೆಯು ಖಂಡಿತವಾಗಿಯೂ ನಿಜವಾಗಿದ್ದರೆ ಕಥನವು ಎಲ್ಲ ಕಡೆಗಳಲ್ಲೂ ಒಂದೇ ರೀತಿಯಾಗಿರಬೇಕಾಗಿತ್ತು. ಹೀಗೆ ಈಗಿರುವಂತೆ ಬೇರೆಬೇರೆ ರೂಪಗಳಲ್ಲಿ ಕೆಲವು ವೇಳೆ ಪರಸ್ಪರ ವಿರೋಧವಾಗಿ ಇರುತ್ತಿರಲಿಲ್ಲ. ಆದುದರಿಂದ ಈ ನಿರೂಪಣೆಯ ಕಥೆಯು ಸತ್ಯವೆಂದು ತಿಳಿಸುವುದಕ್ಕಲ್ಲ. ಹೀಗೆ ಶ್ರುತಿಗಳಲ್ಲಿರುವ ಸೃಷ್ಟಿ ನಿರೂಪಣಾ ಭಾಗವು ಆತ್ಮದ ಏಕತೆಯನ್ನು ಗುರುತಿಸುವುದಕ್ಕೆ ಕೇವಲ ಪೀಠಿಕೆಯಷ್ಟೆ.

## 39. ವ್ಯಾವಹಾರಿಕ ಪ್ರಪಂಚವು ಅಂತ್ಯದಲ್ಲಿ ಸತ್ಯವಾದುದಲ್ಲ.

ಸರ್ವವ್ಯವಹಾರಾಣಾಮೇವ ಪ್ರಾಗ್ಬ್ರಹ್ಮಾತ್ಮತಾ ವಿಜ್ಞಾನಾತ್ ಸತ್ಯತ್ವೋಪಪತ್ತೇಃ. ಸ್ವಪ್ನವ್ಯವಹಾರಸ್ಯೇವ ಪ್ರಾಕ್ಪ್ರಬೋಧಾತ್. ಯಾವದ್ಧಿ ನ ಸತ್ಯಾತ್ಮೈಕಪ್ರತಿಪತ್ತಿಃ ತಾವತ್ಪ್ರಮಾಣಪ್ರಮೇಯಫಲಲಕ್ಷಣೇಷು ವಿಕಾರೇಷು ಅನುತತ್ವಬುದ್ಧಿರ್ನ ಕಸ್ಯಚಿತ್ ಉತ್ಪದ್ಯತೇ. ವಿಕಾರಾನೇವ ತು 'ಅಹಂ' 'ಮಮ'ಇತ್ಯವಿದ್ಯಯಾ ಆತ್ಮಾತ್ಮೀಯೇನ ಭಾವೇನ ಸರ್ವೋ ಜಂತುಃ ಪ್ರತಿಪದ್ಯತೇ ಸಾಭಾವಿಕೀಂ ಬ್ರಹ್ಮಾತ್ಮತಾಂ ಹಿತ್ವಾ.

–ಬ್ರ. ಸೂ. ಭಾ. I, i, 14

ಒಬ್ಬನು ಎಚ್ಚರಗೊಳ್ಳುವುದಕ್ಕೆ ಮುಂಚೆ ಸ್ವಪ್ನವ್ಯವಹಾರಗಳೆಲ್ಲವೂ ಸತ್ಯವಾಗಿರುವಂತೆ ಬ್ರಹ್ಮನೇ ಆತ್ಮವೆಂಬ ಸತ್ಯದ ಅರಿವಾಗುವುದಕ್ಕೆ ಮುಂಚೆ ಎಲ್ಲ ವ್ಯವಹಾರಗಳೂ ಸತ್ಯವೇ. ನಿಜವಾದ ಏಕವಾದ ಆತ್ಮದ ಜ್ಞಾನ ಇಲ್ಲದಿರುವತನಕ ಯಾರಿಗೂ ಪ್ರಮಾಣ, ಪ್ರಮೇಯ ಫಲ ಲಕ್ಷಣ ವಿಕಾರಗಳು ಅಸತ್ಯವಾಗುವುದಿಲ್ಲ. 'ನಾನು' 'ನನ್ನ' ಎಂಬ ಭಾವನೆಗಳಿಂದ ಅವನ್ನೇ ಅವಿದ್ಯೆಯ ಪರಿಣಾಮವಾಗಿ ಆತ್ಮವೆಂದು ಗಣಿಸಿ ಎಲ್ಲ ಜಂತುಗಳೂ ಬ್ರಹ್ಮನೇ ಆತ್ಮವೆಂಬ ಸಹಜಸತ್ಯವನ್ನು ತಿಳಿಯುವುದಿಲ್ಲ.

# V. ಜೀವ

## 40. ಜೀವಾತ್ಮ

ಜೀವೋ ಹಿ ನಾಮ ಚೇತನಃ ಶರೀರಾಧ್ಯಕ್ಷಃ ಪ್ರಾಣಾನಾಂ ಧಾರಯಿತಾ.

–ಬ್ರ. ಸೂ. ಭಾ. I, i. 6

ಜೀವಾತ್ಮವೆಂದು ಯಾವುದನ್ನು ಕರೆಯುತ್ತೇವೆಯೋ ಅದೇ ಆ ದೇಹವನ್ನು ಆಳುತ್ತಿರುವ ಚೇತನ. ಅದೇ ಪ್ರಾಣಧಾರಣವಾದುದು.

## 41. ಜೀವವು ಬ್ರಹ್ಮನಿಂದ ಬೇರೆಯಲ್ಲ.

ನ ಹಿ ಜೀವೋ ನಾಮ ಅತ್ಯಂತಭಿನ್ನೋ ಬ್ರಹ್ಮಣಃ. ಬುದ್ಧ್ಯಾದ್ಯುಪಾಧಿಕೃತಂ ತು ವಿಶೇಷಮಾಶ್ರಿತ್ಯ ಬ್ರಹ್ಮೈವ ಸನ್ ಜೀವಃ ಕರ್ತಾ ಭೋಕ್ತಾ ಚೇತ್ಯುಚ್ಯತೇ।

–ಬ್ರ. ಸೂ. ಭಾ. I, i, 31

ಯಾವುದನ್ನು ಜೀವವೆಂದು ಕರೆಯುತ್ತೇವೆಯೋ ಅದು ನಿಜವಾಗಿ ಬ್ರಹ್ಮನಿಂದ ಬೇರೆಯಲ್ಲ. ಜೀವವು ಬ್ರಹ್ಮವಾಗಿದ್ದರೂ ಬುದ್ಧಿ ಮುತಾದ ಉಪಾಧಿ ವಿಶೇಷಗಳ ಆಶ್ರಯ ಹೊಂದಿ 'ಕರ್ತಾ' 'ಭೋಕ್ತಾ' ಎಂದು ಕರೆಯಲ್ಪಡುತ್ತದೆ.

## 42. ವ್ಯತ್ಯಾಸಕ್ಕೆ ಅವಿದ್ಯೆಯೇ ಕಾರಣ.

ಜೀವಾತ್ಮಪರಮಾತ್ಮನೋಃ ಅವಿದ್ಯಾಪ್ರತ್ಯುಪಸ್ಥಾಪಿತನಾಮರೂಪರಚಿತದೇಹಾದ್ಯುಪಾಧಿನಿಮಿತ್ತೋ ಭೇದೋ ನ ಪಾರಮಾರ್ಥಿಕಃ.

–ಬ್ರ. ಸೂ. ಭಾ. I, iv, 22

ಜೀವಾತ್ಮ ಪರಮಾತ್ಮಗಳ ನಡುವೆ ಇರುವ ವ್ಯತ್ಯಾಸವು, ನಾಮರೂಪಗಳಿಂದ ರಚಿತವಾದ ದೇಹಾದಿ ಉಪಾಧಿಗಳನ್ನುಂಟುಮಾಡುವ ಅವಿದ್ಯೆಯಿಂದುಂಟಾದುದು. ಪಾರಮಾರ್ಥಿಕ ವ್ಯತ್ಯಾಸವಲ್ಲ.

## 43. ಉಪಾಧಿಗಳು ಕಲ್ಪಿತವಾದುವು.

ಅಜ್ಞಾನಾನ್ಮಾನಸೋಪಾಧೇಃ
ಕರ್ತೃತ್ವಾದೀನಿ ಚಾತ್ಮನಿ ।
ಕಲ್ಪ್ಯಂತೇಂಬುಗತೇ ಚಂದ್ರೇ
ಚಲನಾದಿ ಯಥಾಂಭಸಃ ॥

–ಆ. ಬೋ. 22

ನೀರಿನಲ್ಲಿ ಪ್ರತಿಬಿಂಬಿಸಿರುವ ಚಂದ್ರನಿಗೆ ನೀರಿನ ಚಲನೆಯು ಕಲ್ಪಿತವಾದ ಚಲನೆಯನ್ನುಂಟುಮಾಡುವಂತೆ ಅಜ್ಞಾನದ ಕಾರಣ ಮಾನಸಿಕವಾದ ಉಪಾಧಿಗಳಿಂದ ಆತ್ಮವು ಕಲ್ಪಿತವಾಗುತ್ತದೆ.

## 44. ಆಕಾಶದ ದೃಷ್ಟಾಂತ.

ಆತ್ಮಾ ಪರಃ ಹಿ ಯಸ್ಮಾತ್ ಆಕಾಶವತ್ ಸೂಕ್ಷ್ಮೋ ನಿರವಯವಃ ಸರ್ವಗತಃ ಆಕಾಶವದುಕ್ತಃ ಜೀವೈಃ ಕ್ಷೇತ್ರಜ್ಞೈಃ ಘಟಾಕಾಶೈರಿವ ಘಟಾಕಾಶತುಲ್ಯೈಃ ಉದಿತಃ ಉಕ್ತಃ, ಸ ಏವ ಆಕಾಶಸಮಃ ಪರ ಆತ್ಮಾ. ಅಥವಾ ಘಟಾಕಾಶೈರ್ಯಥಾ ಆಕಾಶ ಉದಿತಃ ಉತ್ಪನ್ನಃ, ತಥಾ ಪರೋ ಜೀವಾತ್ಮಭಿರುತ್ಪನ್ನಃ, ಜೀವಾತ್ಮನಾಂ ಪರಸ್ಮಾದಾತ್ಮನ ಉತ್ಪತ್ತಿರ್ಯಾ ಶ್ರೂಯತೇ ವೇದಾಂತೇಷು. ಸಾ ಮಹಾಕಾಶಾತ್ ಘಟಾಕಾಶೋತ್ಪತ್ತಿಸಮಾ, ನ ಪರಮಾರ್ಥತ ಇತ್ಯಭಿಪ್ರಾಯಃ. ತಸ್ಮಾದೇವಾಕಾಶಾತ್ ಘಟಾದಯಃ ಸಂಘಾತಾ ಯಥಾ ಉತ್ಪದ್ಯಂತೇ, ಏವಮಾಕಾಶಸ್ಥಾನೀಯಾತ್ಪರಮಾತ್ಮನಃ ಪೃಥಿವ್ಯಾದಿಭೂತಸಂಘಾತಾಃ ಆಧ್ಯಾತ್ಮಿಕಾಶ್ಚ ಕಾರ್ಯಕರಣಲಕ್ಷಣಾ ರಜ್ಜುಸರ್ಪವದ್ವಿಕಲ್ಪಾ ಜಾಯಂತೇ.

–ಮಾ. ಕಾ. ಭಾ. iii, 3

ಆಕಾಶದಂತೆ ಪರಮಾತ್ಮನು ಸೂಕ್ಷ್ಮನೂ ನಿರವಯವನೂ ಸರ್ವಗತನೂ ಆದುದರಿಂದ ಪರಮಾತ್ಮನನ್ನು ಆಕಾಶಕ್ಕೆ ಹೋಲಿಸುತ್ತಾರೆ. ಅದು ಘಟಗಳಲ್ಲಿ ಆಕಾಶವು ತುಂಬಿರುವಂತೆ, ಜೀವಗಳಲ್ಲಿ ಉದಿತವಾಗಿರುವಂತೆ ಹೇಳಲ್ಪಟ್ಟಿದೆ. ಅದೇ ಆಕಾಶಸಮವಾದ ಪರಮಾತ್ಮ. ಅಥವಾ ಆಕಾಶವು ಘಟದಲ್ಲಿ ಸೀಮಿತವಾಗಿರುವುದರಿಂದ ಉತ್ಪನ್ನವಾದಂತೆ ಹೇಳುವಹಾಗೆಯೇ ಕ್ಷೇತ್ರಜ್ಞರಾದ ಜೀವಗಳಲ್ಲಿ ಸೀಮಿತವಾಗಿ ಆತ್ಮವು ಉತ್ಪನ್ನವಾಗಿದೆಯೆಂದು ಹೇಳುತ್ತಾರೆ. ವೇದಾಂತ ಗ್ರಂಥಗಳಲ್ಲಿ ಪರಮಾತ್ಮನಿಂದ ಜೀವಾತ್ಮವು ಉತ್ಪನ್ನವಾಗುತ್ತದೆಂದು ಹೇಳಿರುವುದು ಮಹಾಕಾಶದಿಂದ ಘಟಾಕಾಶವು ಉತ್ಪತ್ತಿಯಾಗಿರುವುದಕ್ಕೆ ಸಮಾನವಾಗಿದೆ. ಈ ಉತ್ಪನ್ನವು ಸತ್ಯವಲ್ಲವೆಂಬುದೇ ಅರ್ಥ. ಹೀಗೆ ಆಕಾಶದಿಂದ ಘಟಾಕಾಶವು ಉತ್ಪನ್ನವಾಗುವಂತೆ, ಆಕಾಶಸ್ಥಾನದಲ್ಲಿರುವ ಪರಮಾತ್ಮನಿಂದ ಪೃಥಿವೀ ಮುಂತಾದ ಭೂತಸಂಘಾತಗಳೂ ಆಧ್ಯಾತ್ಮಿಕ ಕಾರ್ಯಕಾರಣ ಲಕ್ಷಣಗಳೂ ಉತ್ಪನ್ನವಾಗಿವೆ. ಹಗ್ಗವನ್ನೇ ಹಾವೆಂದು ಕಲ್ಪಿಸುವಂತೆ ಇವೂ ಕಲ್ಪಿತವಾಗಿವೆ.

# VI. ಜ್ಞಾನ ಮತ್ತು ಕರ್ಮ

## 45. ಜ್ಞಾನದಿಂದ ದ್ವೈತವು ನಾಶವಾಗುತ್ತದೆ.

ರೋಗಾರ್ತಸ್ಯೇವ ರೋಗನಿವೃತ್ತೌ ಸ್ವಸ್ಥತಾ, ತಥಾ ದುಃಖಾತ್ಮಕಸ್ಯಾತ್ಮನೋ ದ್ವೈತಪ್ರಪಂಚೋಪಶಮೇ, ಸ್ವಸ್ಥತಾ, ಅದ್ವೈತಭಾವಃ ಪ್ರಯೋಜನಂ. ದ್ವೈತಪ್ರಪಂಚಸ್ಯ ಚ ಅವಿದ್ಯಾಕೃತತ್ವಾತ್ ವಿದ್ಯಯಾ ತದುಪಶಮಃ ಸ್ಯಾತ್.

–ಮಾ. ಕಾ. ಭಾ. ಭೂಮಿಕಾ

ರೋಗಿಗೆ ರೋಗವು ನಿವೃತ್ತಿಯಾದರೆ ಸ್ವಸ್ಥತೆಯು ಹೇಗೆ ಪುನರ್ಭವಿಸುತ್ತದೆಯೋ ಹಾಗೆಯೇ ದುಃಖಾತ್ಮನಾದವನ ಆತ್ಮಕ್ಕೆ ದ್ವೈತಪ್ರಪಂಚವು ಉಪಶಮನವಾದಾಗ ಸ್ವಸ್ಥತೆಯುಂಟಾಗುತ್ತದೆ. ಅದ್ವೈತ ಭಾವ ಬೆಳೆಯುವುದೇ ಫಲ. ದ್ವೈತಪ್ರಪಂಚವು ಅವಿದ್ಯೆಯಿಂದ ನಿರ್ಮಿತವಾಗಿರುವುದರಿಂದ ವಿದ್ಯೆಯಿಂದ ಅದು ಉಪಶಮನವಾಗಬೇಕು.

## 46. ಕರ್ಮ, ಜ್ಞಾನ–ಇವುಗಳ ಭೇದ.

ಅವಿರೋಧಿತಯಾ ಕರ್ಮ
ನಾವಿದ್ಯಾಂ ವಿನಿವರ್ತಯೇತ್
ವಿದ್ಯಾಽವಿದ್ಯಾಂ ನಿಹಂತ್ಯೇವ
ತೇಜಸ್ತಿಮಿರಸಂಘವತ್ ॥

–ಆ.ಬೋ.

ಕರ್ಮವು ಅವಿದ್ಯೆಗೆ ವಿರೋಧವಲ್ಲವಾದುದರಿಂದ ಅದು ಅವಿದ್ಯೆಯನ್ನು ನಾಶಮಾಡಲಾರದು. ಬೆಳಕು ಕತ್ತಲೆಯನ್ನು ನಾಶಮಾಡುವಂತೆ ವಿದ್ಯೆಯು ಅವಿದ್ಯೆಯನ್ನು ನಾಶಮಾಡುತ್ತದೆ.

## 47. ಅಜ್ಞಾನನಾಶ.

ಪರಿಚ್ಛಿನ್ನ ಇವಾಜ್ಞಾನಾತ್
ತನ್ನಾಶೇ ಸತಿ ಕೇವಲಃ
ಸ್ವಯಂ ಪ್ರಕಾಶತೇ ಹ್ಯಾತ್ಮಾ
ಮೇಘಾಪಾಯೇ ಅಂಶುಮಾನಿವ ॥

-ಆ. ಬೋ. 4

ಅಜ್ಞಾನದಿಂದ ಆತ್ಮವು ಉಪಾಧಿಗೊಳಗಾದಂತೆ ಕಾಣುತ್ತದೆ. ಅಜ್ಞಾನವು ನಾಶವಾದಾಗ, ಆತ್ಮವು, ಮೋಡ ಚದುರಿದಾಗ ಸೂರ್ಯನು ಪ್ರಕಾಶಿಸುವಂತೆ ಪ್ರಕಾಶಿಸುತ್ತದೆ.

## 48. ಕರ್ಮ, ಜ್ಞಾನ.

ಜ್ಞಾನಕರ್ಮಣೋರ್ವಿರೋಧಂ ಪರ್ವತವದಕಂಪ್ಯಮ್ ।
"ದ್ವಾವಿಮಾವಥ ಪಂಥಾನೌ ಯತ್ರ ವೇದಾಃ ಪ್ರತಿಷ್ಠಿತಾಃ
ಪ್ರವೃತ್ತಿಲಕ್ಷಣೋ ದರ್ಮೋ ನಿವೃತ್ತಿಶ್ಚ ವಿಭಾವಿತಃ॥" ಇತ್ಯಾದಿ ಪುತ್ರಾಯ ವಿಚಾರ್ಯ ನಿಶ್ಚಿತಮುಕ್ತಂ ವ್ಯಾಸೇನ ವೇದಾಚಾರ್ಯೇಣ ಭಗವತಾ

–ಈ. ಉ. ಭಾ. 2

ಕರ್ಮಜ್ಞಾನಗಳ ನಡುವೆ ಇರುವ ವ್ಯತ್ಯಾಸವು ಪರ್ವತದಂತೆ ನಿಶ್ಚಲವಾದುದು. ವೇದಾಚಾರ್ಯರಾದ ಭಗವಾನ್ ವ್ಯಾಸರು ತುಂಬ ವಿಚಾರ ಮಾಡಿ ತಮ್ಮ ಮಗನಿಗೆ ಹೀಗೆ ನಿಶ್ಚಿತವಾಗಿ ಬೋಧಿಸಿದರು: ವೇದಗಳಲ್ಲಿ ಈ ಎರಡು ಮಾರ್ಗಗಳನ್ನು ಬೋಧಿಸಿದ್ದಾರೆ, ಒಂದನ್ನು ಪ್ರವೃತ್ತಿಮಾರ್ಗವೆಂದು ಕರೆಯುತ್ತಾರೆ; ಇನ್ನೊಂದಕ್ಕೆ ನಿವೃತ್ತಿಮಾರ್ಗವೆಂದು ಹೆಸರು.

## 49. ಜ್ಞಾನವು ಕರ್ಮಕ್ಕೆ ವಿರೋಧಿ.

ಕರ್ಮವಿಷಯೇ ಚಾನುಕ್ತಿಃ, ತದ್ವಿರೋಧಿತ್ವಾತ್. ಅಸ್ಯ ವಿಜಿಜ್ಞಾಸಿತವ್ಯಸ್ಯ ಆತ್ಮತತ್ವಸ್ಯ ಕರ್ಮವಿಷಯೇಽವಚನಮ್. ಕಸ್ಮಾದಿತಿಚೇತ್, ಆತ್ಮನೋ ಹಿ ಯಥಾವದ್ವಿಜ್ಞಾನಂ ಕರ್ಮಣಾವಿರುಧ್ಯತೇ. ನಿರತಿಶಯಬ್ರಹ್ಮಸ್ವರೂಪೋ ಹ್ಯಾತ್ಮಾ ವಿಜಿಜ್ಞಾಪಯಿಷಿತಃ..... ನ ಹಿ ಸ್ವಾರಾಜ್ಯೇಽಭಿಷಿಕ್ತೋ ಬ್ರಹ್ಮತ್ವಂ ಗಮಿತಃ ಕಂಚನ ನಮಿತುಮಿಚ್ಛತಿ. ಅತೋ ಬ್ರಹ್ಮಾಸ್ಮೀತಿ ಸಂಬುದ್ಧೋ ನ ಕರ್ಮ ಕಾರಯಿತುಂ ಶಕ್ಯತೇ. ನ ಹ್ಯಾತ್ಮಾನಮೇವಾಪ್ತಾರ್ಥಂ ಬ್ರಹ್ಮ ಮನ್ಯಮಾನಃ ಪ್ರವೃತ್ತಿಂ ಪ್ರಾಯೋಜನವತೀಂ ಪಶ್ಯತಿ. ನ ಚ ನಿಷ್ಪ್ರಯೋಜನಾ ಪ್ರವತ್ತಿಃ. ಅತೋ ವಿರುಧ್ಯತ ಏವ ಕರ್ಮಣಾ ಜ್ಞಾನಮ್. ಅತಃ ಕರ್ಮವಿಷಯೇಽನುಕ್ತಿಃ.

–ಕೇ. ಉ. ವಾ. ಭಾ. ಭೂಮಿಕಾ

ಕರ್ಮವಿಷಯ ನಿರೂಪಣೆಯಲ್ಲಿ ಆತ್ಮದ ವಿಷಯ ಬರುವುದಿಲ್ಲ. ಏಕೆಂದರೆ, ಆ ನಿರೂಪಣೆಯೊಡನೆ ಆತ್ಮಕ್ಕೆ ಸಂಬಂಧವಿಲ್ಲ. ಆದುದರಿಂದ ಇಲ್ಲಿ ಆತ್ಮತತ್ವವನ್ನು ಜಿಜ್ಞಾಸೆಮಾಡಬೇಕಾಗಿರುವುದರಿಂದ, ಕರ್ಮ ವಿಷಯ ಸಂಬಂಧವಾಗಿ ಯಾವ ಮಾತೂ ಇಲ್ಲ. 'ಹೀಗೇಕೆ?' ಎಂದು ಕೇಳಿದರೆ ನಮ್ಮ ಉತ್ತರವಿದು: "ಆತ್ಮಜ್ಞಾನವು ಕರ್ಮಕ್ಕೆ ವಿರೋಧವಾಗಿದೆ." ಜಿಜ್ಞಾಸೆ ಮಾಡಬೇಕಾಗಿರುವ ಆತ್ಮವು ನಿರತಿಶಯ ಬ್ರಹ್ಮಸ್ವರೂಪವಾದುದು..... ಸ್ವಾರಾಜ್ಯದಲ್ಲಿ ಅಭಿಷಿಕ್ತನಾಗಿ ಬ್ರಹ್ಮತ್ವವನ್ನು ಸಂಪಾದಿಸಿರುವವನು ಯಾರಿಗೂ ನಮಿಸಲು ಇಚ್ಛಿಸುವುದಿಲ್ಲ. 'ನಾನೇ ಬ್ರಹ್ಮ', 'ಬ್ರಹ್ಮಾಸ್ಮಿ' ಎಂದು ತಿಳಿದಿರುವವನು ಕರ್ಮಗಳನ್ನು ಮಾಡಲು ಸಾಧ್ಯವಿಲ್ಲ. ಬ್ರಹ್ಮವೇ ಸಂಪೂರ್ಣವಾದ ಆತ್ಮವೆಂದು ಯಾರು ತಿಳಿದಿರುತ್ತಾನೋ ಅವನಿಗೆ ಪ್ರವೃತ್ತಿಯಲ್ಲಿ ಯಾವ ಪ್ರಯೋಜನವೂ ಇಲ್ಲ. ವ್ಯರ್ಥವಾದ ಕಾರ್ಯದಲ್ಲಿ ಯಾರೂ

ಪ್ರವರ್ತಿಸುವುದಿಲ್ಲ. ಆದುದರಿಂದ ಜ್ಞಾನವು ಕರ್ಮಕ್ಕೆ ವಿರೋಧಿಯಾಗಿದೆ. ಹೀಗೆ ಕರ್ಮಸಂಬಂಧದಲ್ಲಿ ಆತ್ಮಜ್ಞಾನವಿಷಯವು ಹೇಳಲ್ಪಡುವುದಿಲ್ಲ.

## 50. ಜ್ಞಾನವು ಕರ್ಮಾವಲಂಬಿಯಲ್ಲ.

ನ ಹಿ ಸರ್ವಕ್ರಿಯಾಕಾರಕಫಲಭೇದಬುದ್ಧಿತಿರಸ್ಕಾರಿಣ್ಯಾ ಬ್ರಹ್ಮವಿದ್ಯಾಯಾಃ ಶೇಷಾಪೇಕ್ಷಾ ಸಹಕಾರಿಸಾಧನಸಂಬಂಧೋ ವಾ ಯುಜ್ಯತೇ. ಸರ್ವವಿಷಯವ್ಯಾವೃತ್ತ ಪ್ರತ್ಯಗಾತ್ಮವಿಷಯನಿಷ್ಠ ತ್ವಾಚ್ಚ ಬ್ರಹ್ಮವಿದ್ಯಾಯಾಃ ತತ್ಫಲಸ್ಯ ಚ ನಿಶ್ರೇಯಸಸ್ಯ "ಮೋಕ್ಷಮಿಚ್ಛನ್ ಸದಾ ಕರ್ಮತ್ಯಜೇದೇವ ಸಸಾಧನಮ್. ತ್ಯಜತೈವ ಹಿ ತಜ್ಞೇಯಂ ತ್ಯಕ್ತುಃ ಪ್ರತ್ಯಕ್ ಪರಂ ಪದಂ" ತಸ್ಮಾತ್ ಕರ್ಮಣಾಂ ಸಹಕಾರಿತ್ವಂ ಕರ್ಮ ಶೇಷಾಪೇಕ್ಷಾ ವಾ ನ ಜ್ಞಾನಸ್ಯೋಪಪದ್ಯತೇ.

ಕೇ.ಉ.ಪ.ಭಾ. iv, 7

ಎಲ್ಲ ಕ್ರಿಯಾಕಾರಕ ಫಲಭೇದಬುದ್ಧಿಗಳನ್ನೂ ತಿರಸ್ಕರಿಸುವ ಬ್ರಹ್ಮ ವಿದ್ಯೆಯು, ಇತರ ಸಣ್ಣ ಅಪೇಕ್ಷೆಗಳನ್ನಾಗಲೀ ಉಪಸಾಧನ ಸಂಬಂಧಗಳನ್ನಾಗಲೀ ನಿರೀಕ್ಷಿಸುವುದು ಯೋಗ್ಯವಾಗುವುದಿಲ್ಲ; ಏಕೆಂದರೆ, ಎಲ್ಲ ವಿಷಯಗಳನ್ನೂ ಬಿಟ್ಟಿರುವ ಪ್ರತ್ಯಗಾತ್ಮನಿಷ್ಠೆಯುಳ್ಳ ಬ್ರಹ್ಮಜ್ಞಾನಕ್ಕೆ ಮೋಕ್ಷವೇ ಫಲ. ಹೀಗೆ ಹೇಳಲ್ಪಟ್ಟಿದೆ: "ಮೋಕ್ಷವನ್ನು ಅಪೇಕ್ಷಿಸುವವನು ಕರ್ಮವನ್ನೂ ಕರ್ಮಸಾಧನಗಳನ್ನೂ ತ್ಯಜಿಸಬೇಕು. ಯಾವನು ಹೀಗೆ ತ್ಯಜಿಸುತ್ತಾನೋ ಅವನೇ ಪರಮಪದವಾದ ಪ್ರತ್ಯಗಾತ್ಮವನ್ನು ಸಾಧಿಸಬಹುದು. ಆದುದರಿಂದ ಜ್ಞಾನವು ಕರ್ಮದ ಸಹಾಯವನ್ನು ಅಪೇಕ್ಷಿಸಬೇಕು ಅಥವಾ ಕರ್ಮವನ್ನು ಅವಲಂಬಿಸಬೇಕು ಎಂಬುದು ಉಪಪನ್ನವಾಗುವುದಿಲ್ಲ.

## 51. ಕರ್ಮದ ಮೂಲಕ ಮನಶ್ಶುದ್ಧಿಯುಂಟಾಗುತ್ತದೆ.

ಸರ್ವಮೇತದ್ಯಥೋಕ್ತಂ ಕರ್ಮ ಚ ಜ್ಞಾನಂ ಚ ಸಮ್ಯಗನುಷ್ಠಿತಂ ನಿಷ್ಕಾಮಸ್ಯ ಮುಮುಕ್ಷೋಃ ಸತ್ವಶುದ್ಧ್ಯರ್ಥಂ ಭವತಿ. ಸಕಾಮಸ್ಯ ತು ಜ್ಞಾನರಹಿತಸ್ಯ ಕೇವಲಾನಿ ಶ್ರೌತಾನಿ ಸ್ಮಾರ್ತಾನಿ ಚ ಕರ್ಮಾಣಿ ದಕ್ಷಿಣಮಾರ್ಗಪ್ರತಿಪತ್ತಯೇ ಪುನರಾವೃತ್ತಯೇ ಚ ಭವಂತಿ. ಸ್ವಾಭಾವಿಕ್ಯಾ ತ್ವಶಾಸ್ತ್ರೀಯಯಾ ಪ್ರವೃತ್ತ್ಯಾ ಪಶ್ವಾದಿಸ್ಥಾವರಾಂತಾಧೋಗತಿಃ ಸ್ಯಾತ್.....ವಿಶುದ್ಧಸತ್ವಸ್ಯತು ನಿಷ್ಕಾಮಸ್ಯೈವ ಬಾಹ್ಯಾದನಿತ್ಯಾತ್ ಸಾಧ್ಯಸಾಧನಸಂಬಂಧಾದಿಹ ಕೃತಾತ್ ಪೂರ್ವಕೃತಾದ್ವಾ ಸಂಸ್ಕಾರವಿಶೇಷೋದ್ಭವಾತ್ ವಿರಕ್ತಸ್ಯ ಪ್ರತ್ಯಗಾತ್ಮವಿಷಯಾ ಜಿಜ್ಞಾಸಾ ಪ್ರವರ್ತತೇ.

–ಕೇ.ಉ.ಪ.ಭಾ.ಭೂಮಿಕಾ

ಎಲ್ಲ ಕರ್ಮವೂ ಆ ಕರ್ಮಸಂಬಂಧಿಯಾದ ಜ್ಞಾನವೂ ನಿಷ್ಕಾಮನಾದ ಮೋಕ್ಷಾರ್ಥಿಯಿಂದ ಆಚರಿಸಲ್ಪಟ್ಟರೆ ಅಂಥವನ ಸತ್ವಶುದ್ಧಿಯಾಗುತ್ತದೆ. ಸಕಾಮಿಯಾದರೆ ಜ್ಞಾನರಹಿತವಾಗಿ ಶ್ರುತಿಸ್ಮೃತಿಗಳಲ್ಲಿ ಹೇಳಿರುವಂತೆಯೇ ಕರ್ಮಗಳನ್ನು ಅನುಸರಿಸಿದರೆ ಅದು ದಕ್ಷಿಣಮಾರ್ಗ ಪ್ರತಿಪತ್ತಿಯನ್ನುಂಟುಮಾಡಿ ಕೊನೆಗೆ ಈ

ಲೋಕಕ್ಕೆ ಹಿಂದಿರುಗಲು ಅವಕಾಶವನ್ನುಂಟುಮಾಡುತ್ತದೆ. ಅಶಾಸ್ತ್ರೀಯವಾದ ಸ್ವಾಭಾವಿಕ ಕರ್ಮದ ಅನುಸರಣೆಯಿಂದ ಪಶು ಮುಂತಾದ ಗತಿಗಳಿಂದ ಸ್ಥಾವರಗತಿಯವರೆಗೆ ಅಧೋಗತಿಯುಂಟಾಗುತ್ತದೆ....ವಿಶುದ್ಧವಾದ ಸತ್ವವುಳ್ಳ, ನಿಷ್ಕಾಮಿಯಾದ, ಬಹಿರಂಗದ ಅನಿತ್ಯವಿಷಯದ ಸಾಧ್ಯಸಾಧನ ಸಂಬಂಧವಿಲ್ಲದ, ಈಗಲಾಗಲೀ ಪೂರ್ವಜನ್ಮದಲ್ಲಾಗಲೀ ಉಂಟಾದ ಸಂಸ್ಕಾರದಲ್ಲಿ ವಿರಕ್ತಿಯುಳ್ಳ ಮಾನವನಿಗೆ ಪ್ರತ್ಯಗಾತ್ಮದ ವಿಷಯದಲ್ಲಿ ಜಿಜ್ಞಾಸೆ ಮಾಡಲು ಪ್ರವೃತ್ತಿಯುಂಟಾಗುತ್ತದೆ.

## 52. ಈಕ್ಷಣಾ ಸಂನ್ಯಾಸ

ಪ್ರಜಾಕರ್ಮತತ್ಸಂಯುಕ್ತವಿದ್ಯಾಭಿರ್ಮನುಷ್ಯಪಿತೃದೇವಲೋಕತ್ರಯಸಾಧನೈಃ ಅನಾತ್ಮಲೋಕಪ್ರತಿಪತ್ತಿಕಾರಣೈಃ ಕಿಂ ಕರಿಷ್ಯಾಮಃ? ನ ಚಾಸ್ಮಾಕಂ ಲೋಕತ್ರಯಮನಿತ್ಯಂ ಸಾಧನ ಸಾಧ್ಯಮಿಷ್ಟಂ; ಯೇಷಾಮಸ್ಮಾಕಂ ಸ್ವಾಭಾವಿಕೋಽಜೋಽಜರೋಽಮೃತೋಽಭಯೋ ನ ವರ್ಧತೇ ಕರ್ಮಣಾ ನೋ ಕನೀಯಾನ್ ನಿತ್ಯಶ್ಚ ಲೋಕ ಇಷ್ಟಃ. ಸ ಚ ನಿತ್ಯತ್ವಾನ್ನಾವಿದ್ಯಾನಿವೃತ್ತಿವ್ಯತಿರೇಕೇಣಾನ್ಯಸಾಧನನಿಷ್ಪಾದ್ಯಃ. ತಸ್ಮಾತ್ ಪ್ರತ್ಯಗಾತ್ಮಬ್ರಹ್ಮವಿಜ್ಞಾನಪೂರ್ವಕಃ ಸರ್ವೈಷಣಾಸಂನ್ಯಾಸ ಏವ ಕರ್ತವ್ಯ ಇತಿ.

ಕರ್ಮಸಹಭಾವಿತ್ವವಿರೋಧಾಚ್ಚ ಪ್ರತ್ಯಗಾತ್ಮಬ್ರಹ್ಮವಿಜ್ಞಾನಸ್ಯ. ನ ಹಿ ಉಪಾತ್ತಕಾರಕಫಲಭೇದವಿಜ್ಞಾನೇನ ಕರ್ಮಣಾ ಪ್ರತ್ಯಸ್ತಮಿತಸರ್ವ ಭೇದದರ್ಶನಸ್ಯ ಪ್ರತ್ಯಗಾತ್ಮಬ್ರಹ್ಮವಿಷಯಸ್ಯ ಸಹಭಾವಿತ್ವಮುಪಪದ್ಯತೇ. ವಸ್ತುಪ್ರಾಧಾನ್ಯೇ ಸತ್ಯಪುರುಷತಂತ್ರತ್ವಾದ್ಬ್ರಹ್ಮಜ್ಞಾನಸ್ಯ. ತಸ್ಮಾತ್ ದೃಷ್ಟಾದೃಷ್ಟೇಭ್ಯಃ ಬಾಹ್ಯಸಾಧ್ಯಸಾಧನೇಭ್ಯೋ ವಿರಕ್ತಸ್ಯ ಪ್ರತ್ಯಗಾತ್ಮವಿಷಯಾ ಬ್ರಹ್ಮಜಿಜ್ಞಾಸಾ.

–ಕೇ.ಉ.ಪ.ಭಾ.ಭೂಮಿಕಾ

ಆತ್ಮಲೋಕಸಾಧನೆಗೆ ಕಾರಣವಲ್ಲದ ಮರ್ತ್ಯಲೋಕ, ಪಿತೃಲೋಕ, ದೇವಲೋಕ ಸಾಧಕಗಳಾದ ಮಕ್ಕಳು, ಕರ್ಮ, ಅವುಗಳ ಜ್ಞಾನ–ಇವುಗಳನ್ನು ಏನು ಮಾಡೋಣ? ಈ ಮಾರ್ಗದಲ್ಲಿ ಸಾಧಿಸಬಹುದಾದ ನಶ್ವರವಾದ ಮೂರು ಲೋಕಗಳೂ ನಮಗೆ ಇಷ್ಟವಾದುವಲ್ಲ. ನಮಗೆ ಸ್ವಾಭಾವಿಕವಾದ, ಹುಟ್ಟದ, ಮುದಿಯಾಗದ, ಸಾಯದ, ಭಯವಿಲ್ಲದ, ಕರ್ಮದಿಂದ ಹೆಚ್ಚು ಕಡಮೆಯೂ ಆಗದ ಶಾಶ್ವತವಾದ ಲೋಕವೆ ಇಷ್ಟವಾದುದು. ಅದು ಶಾಶ್ವತವಾಗಿರುವುದರಿಂದ ಅವಿದ್ಯೆಯ ನಿರ್ಮೂಲವಲ್ಲದೆ ಬೇರಾವ ಸಾಧನೆಯಿಂದಲೂ ಪಡೆಯಲಾಗುವುದಿಲ್ಲ. ಆದುದರಿಂದ ಪ್ರತ್ಯಗಾತ್ಮವಾದ ಬ್ರಹ್ಮಜ್ಞಾನಪೂರ್ವಕವಾಗಿ ಎಲ್ಲ ಅಪೇಕ್ಷೆಗಳನ್ನೂ ತ್ಯಜಿಸಬೇಕು.

ಪ್ರತ್ಯಗಾತ್ಮವಾದ ಬ್ರಹ್ಮದ ಜ್ಞಾನವು ಕರ್ಮಸಂಬಂಧಿಯಾಗಿರಲು ವಿರೋಧವಾಗಿರುವುದೂ ಮತ್ತೊಂದು ಕಾರಣ. ಎಲ್ಲ ಭೇದವನ್ನೂ ನಿರ್ಮೂಲಗೊಳಿಸಿರುವ ದರ್ಶನವುಳ್ಳ ಪ್ರತ್ಯಗಾತ್ಮ ಬ್ರಹ್ಮವಿಷಯಕ್ಕೂ ಕಾರಕಫಲ ಭೇದಗಳ ಜ್ಞಾನವುಳ್ಳ ಕರ್ಮಕ್ಕೂ ಸಹಭಾವಿತ್ವವು ಉಪಪನ್ನವಾಗುವುದಿಲ್ಲ. ಏಕೆಂದರೆ

ಸತ್ಯಪ್ರಧಾನವಾದ ಬ್ರಹ್ಮಜ್ಞಾನವು ಯಾವ ಮಾನವತಂತ್ರಗಳನ್ನೂ ಅವಲಂಬಿಸಿರುವುದಿಲ್ಲ. ಆದುದರಿಂದ ಬ್ರಹ್ಮಜಿಜ್ಞಾಸೆಯು ಪ್ರತ್ಯಗಾತ್ಮ ವಿಷಯವಾದುದರಿಂದ ದೃಷ್ಟಾದೃಷ್ಟ ವಿಷಯಗಳ ಬಗ್ಗೆಯೂ ಬಾಹ್ಯ ಸಾಧ್ಯಸಾಧನ ವಿಷಯಗಳ ಬಗ್ಗೆಯೂ ವಿರಕ್ತನಾದವನಿಗೆ ಮಾತ್ರ ಸಾಧ್ಯ.

## 53. ಜ್ಞಾನದ ಅಗತ್ಯತೆ.

ಕಷ್ಟಾ ಖಲು ಸುರನರತಿರ್ಯಕ್ಪ್ರೇತಾದಿಷು ಸಂಸಾರದುಃಖಬಹುಲೇಷು ಪ್ರಾಣಿನಿಕಾಯೇಷು ಜನ್ಮಜರಾಮರಣರೋಗಾದಿಸಂಪ್ರಾಪ್ತಿರಜ್ಞಾನಾತ್. ಅತ ಇಹೈವ ಚೇನ್ಮನುಷ್ಯೋಽಧಿಕೃತಃ ಸಮರ್ಥಃ ಸನ್ ಯದ್ಯವೇದೀದಾತ್ಮಾನಂ ಯಥೋಕ್ತಲಕ್ಷಣಂ ವಿದಿತವಾನ್ ಯಥೋಕ್ತೇನ ಪ್ರಕಾರೇಣ, ಅಥ ತದಾಸ್ತಿ ಸತ್ಯಂ ಮನುಷ್ಯಜನ್ಮನ್ಯಸ್ಮಿನ್ ಅವಿನಾಶೋಽರ್ಥವತ್ತಾ ವಾ ಸದ್ಭಾವೋ ವಾ ಪರಮಾರ್ಥತಾ ವಾ ಸತ್ಯಂ ವಿದ್ಯತೇ ....ನ ಚೇದಿಹ ಜೀವನ್ ಚೇದಧಿಕೃತಃ ಅವೇದೀತ್, ನ ವಿದಿತವಾನ್ ತದಾ ಮಹತೀ ದೀರ್ಘಾನಂತಾ ವಿನಷ್ಟಿಃ ವಿನಾಶನಂ ಜನ್ಮಜರಾಮರಣಾದಿಪ್ರಬಂಧಾವಿಚ್ಛೇದಲಕ್ಷಣಾ ಸಂಸಾರಗತಿಃ.

–ಕೇ. ಉ. ಪ. ಭಾ ii, 5

ಅಜ್ಞಾನದ ಪರಿಣಾಮವಾಗಿ ದೇಹಾಂತರಪ್ರಾಪ್ತಿಯ ದುಃಖವು ಅತಿಶಯವಾಗಿರುವ ದೇವ, ಮಾನವ, ಪ್ರಾಣಿ, ಪ್ರೇತ ಮುಂತಾದದೇಹಗಳಲ್ಲಿ ಹುಟ್ಟಿ ಜನ್ಮ, ಜರೆ, ಮೃತ್ಯು, ರೋಗ ಮುಂತಾದವುಗಳನ್ನು ಅನುಭವಿಸುವುದು ತುಂಬ ಕಷ್ಟ. ಆದುದರಿಂದ ಮಾನವನು ಇಹದಲ್ಲಿ ಅಧಿಕೃತನಾಗಿ ಸಮರ್ಥನಾಗಿ ಯಥೋಕ್ತಲಕ್ಷಣವಾದ ಆತ್ಮವನ್ನು ಯಥೋಕ್ತಪ್ರಕಾರದಲ್ಲಿ ತಿಳಿದರೆ ಆಗ ಸತ್ಯವಿರುವುದು ಕಂಡುಬರುತ್ತದೆ. ಅಂದರೆ ಈ ಮಾನವ ಜನ್ಮದಲ್ಲಿ ಶಾಶ್ವತತೆಯೂ ಉದ್ದೇಶಪೂರ್ಣತೆಯೂ 'ಸತ್' ಭಾವವೂ ಪರಮಾರ್ಥವೂ ಖಂಡಿತವಾಗಿ ಇದೆ ಎಂದರ್ಥ. ಆದರೆ ಇಹದಲ್ಲಿದ್ದು ಅಧಿಕಾರಿಯಾಗಿದ್ದು ಬ್ರಹ್ಮವನ್ನು ಅರಿಯದೆ ಹೋದರೆ ಆಗ ಜನ್ಮ ಜರಾಮರಣಾದಿಗಳನ್ನು ಮುಂದುವರಿಸುವ ದೇಹಾಂತರ ಪ್ರಾಪ್ತಿಯ ಮಹತ್ತಾದ ಧೀರ್ಘವಾದ ಅನಂತವಾದ ವಿನಾಶವುಂಟಾಗುತ್ತದೆ.

## 54. ಆತ್ಮವು ಆತ್ಮಸಿದ್ಧವಾದುದು.

ನ ಹಿ ಸ್ವಭಾವಸಿದ್ಧಂ ವಸ್ತು ಸಿಷಾಧಯಿಷತಿ ಸಾಧನೈಃ, ಸ್ವಭಾವಸಿದ್ಧಶ್ಚ ಆತ್ಮಾ. ತಥಾ ನಾಪಿಪಯಿಷಿತಃ, ಆತ್ಮತ್ವೇ ಸತಿ ನಿತ್ಯಾಪ್ತತ್ವಾತ್. ನಾಪಿ ವಿಚಿಕಾರಯಿಷಿತಃ, ಆತ್ಮತ್ವೇ ಸತಿ ನಿತ್ಯತ್ವಾದ ವಿಕಾರಿತ್ವಾದವಿಷಯತ್ವಾದಮೂರ್ತತ್ವಾಚ್ಚ. ...ನ ಚ ಸಂಚಿಕೀರ್ಷಿತಃ....ಅನನ್ಯತ್ವಾಚ್ಚ. ಅನ್ಯೇನಾನ್ಯತ್ ಸಂಸ್ಕ್ರಿಯತೇ. ನ ಚಾತ್ಮನೋಽನ್ಯಭೂತಾ ಕ್ರಿಯಾ ಅಸ್ತಿ, ನ ಚ ಸ್ವೇನೈವಾತ್ಮನಾ ಸ್ವಾತ್ಮಾನಂ

ಸಂಚಿಕೀರ್ಷೇತ್. ನ ಚ ವಸ್ತ್ವಂತರಾಧಾನಂ ನಿತ್ಯಪ್ರಾಪ್ತಿರ್ವಾ ವಸ್ತ್ವಂತರಸ್ಯ ನಿತ್ಯಾ. ನಿತ್ಯತ್ವಂ ಚೇಷ್ಟಂ ಮೋಕ್ಷಸ್ಯ. ಅತಃ ಉತ್ಪನ್ನವಿದ್ಯಸ್ಯ ಕಾರ್ಮಾರಂಭೋಽನುಪಪನ್ನಃ

–ಕೇ. ಉ. ವಾ. ಭಾ. ಭೂಮಿಕಾ

ಸ್ವತಃಸಿದ್ಧವಾದ ಸತ್ಯವನ್ನು ಸಾಧನಗಳ ಮೂಲಕ ಸಾಧಿಸಲು ಪ್ರಯತ್ನಪಡುವುದಿಲ್ಲ. ಆತ್ಮವು ಸ್ವತಃಸಿದ್ಧವಾದುದು. ಹೀಗೆಯೇ ಅದು ನಿತ್ಯಾಪ್ತವಾದುದರಿಂದ ಹೊಸದಾಗಿ ಆಪ್ತವಾದುದಲ್ಲ. ಅದು ಶಾಶ್ವತವಾದುದು, ಅವಿಕಾರಿಯಾದುದು, ಅವಸ್ತುವಾದುದು ಮತ್ತು ಅಮೂರ್ತವಾದುದು. ಆದುದರಿಂದ ವಿಕಾರಕ್ಕೆ ಒಳಗಾಗುವುದಿಲ್ಲ. ಅದನ್ನು ಸಂಸ್ಕಾರಗೊಳಿಸಲಾಗುವುದಿಲ್ಲ. ಏಕೆಂದರೆ ಅದು ಅದರಿಂದ ಬೇರೆಯಾದುದಲ್ಲ. ಒಬ್ಬರು ಇನ್ನೊಬ್ಬರನ್ನು ಸಂಸ್ಕಾರಗೊಳಿಸಬಹುದು. ಆದರೆ ಆತ್ಮನಿಂದ ಬೇರೆಯಾದ ಕರ್ಮವೆಂದು ಕರೆಯಬಹುದಾದ ಯಾವುದೂ ಇಲ್ಲ. ಆತ್ಮವು ತನ್ನಿಂದ ತಾನೇ ಸಂಸ್ಕಾರಗೊಳ್ಳಲು ಇಚ್ಛಿಸುವುದಿಲ್ಲ. ಒಂದು ಇನ್ನೊಂದನ್ನು ಸ್ವೀಕರಿಸುವುದು ಅಥವಾ ಅದೇ ಆಗುವುದು, ಶಾಶ್ವತವಾದುದಲ್ಲ. ಆದರೆ ಮೋಕ್ಷವೆನ್ನುವುದು ನಿತ್ಯವಾದುದು ಎಂದು ಎಲ್ಲರ ಒಪ್ಪಿಗೆ. ಆದುದರಿಂದ ಯಾರಲ್ಲಿ ವಿದ್ಯೆ ಉತ್ಪನ್ನವಾಗಿದೆಯೋ ಅವನಲ್ಲಿ ಕರ್ಮಾರಂಭವು ಉಪಪನ್ನವಾಗುವುದಿಲ್ಲ.

### 55. ಕರ್ಮ, ಜ್ಞಾನಗಳಿಗೆ ಇರುವ ಸಂಬಂಧ.

ಕರ್ಮನಿಷ್ಠಾಯಾ ಜ್ಞಾನನಿಷ್ಠಾಪ್ರಾಪ್ತಿಹೇತುತ್ವೇನ ಪುರುಷಾರ್ಥಹೇತುತ್ವಂ, ನ ಸ್ವಾತಂತ್ರ್ಯೇಣ, ಜ್ಞಾನನಿಷ್ಠಾ ತು ಕರ್ಮನಿಷ್ಠೋಪಾಯಲಬ್ಧಾತ್ಮಿಕ ಸತೀ ಸ್ವಾತಂತ್ರ್ಯೇಣ ಪುರುಷಾರ್ಥಹೇತುಃ, ಅನ್ಯಾನಪೇಕ್ಷಾ.

–ಭ. ಗೀ. ಭಾ. iii, 4

ಕರ್ಮನಿಷ್ಠೆಯು ಜ್ಞಾನನಿಷ್ಠೆಯ ಪ್ರಾಪ್ತಿಗೆ ಕಾರಣವಾಗಿ ಪುರುಷಾರ್ಥ ಸಾಧನೆಗೆ ಸಹಾಯಕವಾಗುತ್ತದೆ; ಸ್ವತಂತ್ರವಾಗಿ ಸಹಾಯಕವಲ್ಲ. ಕರ್ಮನಿಷ್ಠೆಯ ಮಾರ್ಗದಿಂದ ಲಬ್ಧವಾಗಿದ್ದರೂ ಜ್ಞಾನ ನಿಷ್ಠೆಯು ಸ್ವತಂತ್ರವಾಗಿ ಪುರುಷಾರ್ಥ ಕಾರಣವಾಗುತ್ತದೆ. ಮತ್ತಾವುದನ್ನೂ ಅದು ಕೋರುವುದಿಲ್ಲ.

### 56. ಜ್ಞಾನಸಾಧನೆಯಾದಮೇಲೆ ಕರ್ಮವೆಂಬುದಿಲ್ಲ.

ನಾಯಾಚ್ಚ – ಉಪಾಯಭೂತಾನಿ ಹಿ ಕರ್ಮಾಣಿ ಸಂಸ್ಕಾರದ್ವಾರೇಣ ಜ್ಞಾನಸ್ಯ. ಜ್ಞಾನೇನ ತು ಅಮೃತತ್ವಪ್ರಾಪ್ತಿಃ..... ನ ಹಿ ನದ್ಯಾಃ ಪಾರಗೋ ನಾವಂ ನ ಮುಂಚತಿ ಯಥೇಷ್ಟದೇಶಗಮನಂ ಪ್ರತಿ ಸ್ವಾತಂತ್ರ್ಯೇ ಸತಿ.

–ಕೇ. ಉ. ವಾ. ಭಾ. ಭೂಮಿಕಾ

ಇದು ವಾದ – ಕರ್ಮವು ಮನಸ್ಸನ್ನು ಶುದ್ಧಗೊಳಿಸುವುದರ ಮೂಲಕ ಜ್ಞಾನಕ್ಕೆ ಕಾರಣವಾಗಿದೆ. ಆದರೆ ಜ್ಞಾನದಿಂದ ಶಾಶ್ವತತೆಯು ಸಾಧನೆಯಾಗುತ್ತದೆ. ನದಿಯನ್ನು ದಾಟಿದ ಮೇಲೆ ತನ್ನಿಷ್ಟ ಬಂದಕಡೆಗೆ ಹೋಗುವ ಸ್ವಾತಂತ್ರ್ಯ ಇರುವಾಗ ಯಾರೂ ದೋಣಿಗೆ ಅಂಟಿ ಕೂರುವುದಿಲ್ಲ.

### 57. ಜ್ಞಾನಿಗೆ ಕರ್ಮಯೋಗವಿಲ್ಲ.

ಆತ್ಮತ್ತ್ವವಿದಃ ಸಮ್ಯಗ್ದರ್ಶನವಿರುದ್ಧೋ ಮಿಥ್ಯಾಜ್ಞಾನಹೇತುಕಃ ಕರ್ಮಯೋಗಃ ಸ್ವಪ್ನೇಽಪಿ ಸಂಭಾವಯಿತುಂ ನ ಶಕ್ಯಃ.

–ಭ. ಗೀ. ಭಾ. v, 1

ಆತ್ಮವನ್ನು ಅರಿತವನಿಗೆ ಸಮ್ಯಕ್‌ದರ್ಶನಕ್ಕೆ ವಿರುದ್ಧವಾದ, ಮಿಥ್ಯಾಜ್ಞಾನಕ್ಕೆ ಕಾರಣವಾದ ಕರ್ಮಯೋಗವು ಸ್ವಪ್ನದಲ್ಲಿಯೂ ಸಾಧ್ಯವಿಲ್ಲ.

## VII. ಕಾರಣ ಮತ್ತು ಗುರಿ

### 58. ವೇದಾಂತವ್ಯಾಸಂಗಕ್ಕೆ ಅರ್ಹತೆ.

ನಿತ್ಯಾನಿತ್ಯವಸ್ತುವಿವೇಕಃ, ಇಹಾಮುತ್ರಾರ್ಥಭೋಗವಿರಾಗಃ, ಶಮದಮಾದಿಸಾಧನ ಸಂಪತ್ ಮುಮುಕ್ಷುತ್ವಂ ಚ. ತೇಷು ಹಿ ಸತ್ಸು ಪ್ರಾಗಪಿ ಧರ್ಮಜಿಜ್ಞಾಸಾಯಾ ಊರ್ಧ್ವಂ ಚ ಶಕ್ಯತೇ ಬ್ರಹ್ಮ ಜಿಜ್ಞಾಸಿತುಂ ಚ ನ ವಿಪರ್ಯಯೇ.

–ಬ್ರ.ಸೂ.ಭಾ. I, i, 1

ನಿತ್ಯಾನಿತ್ಯವಸ್ತುವಿವೇಚನೆ, ಇಹದಲ್ಲೂ ಪರದಲ್ಲೂ ಭೋಗದಲ್ಲಿ ವೈರಾಗ್ಯ, ಶಮದಮ ಮುಂತಾದ ಸಾಧನಸಂಪತ್ತು, ಮೋಕ್ಷಾಪೇಕ್ಷೆ ಮುಂತಾದುವು ಇರುವುದಾದರೆ ಧರ್ಮಜಿಜ್ಞಾಸೆಗೆ ಮುಂಚೆಯೇ ಅಥವಾ ಅಮೇಲೆ, ಬ್ರಹ್ಮಜಿಜ್ಞಾಸೆ ಮಾಡಲು ಸಾಧ್ಯ. ಇಲ್ಲದಿದ್ದರೆ ಆಗುವುದಿಲ್ಲ.

### 59. ಆತ್ಮಹಂತಕರು.

ಆತ್ಮಹನಃ ಕೇ, ತೇ ಜನಾಃ ಯೇ ಅವಿದ್ವಾಂಸಃ. ಕಥಂ ತೇ ಆತ್ಮಾನಂ ನಿತ್ಯಂ ಹಿಂಸಂತಿ? ಅವಿದ್ಯಾದೋಷೇಣ ವಿದ್ಯಮಾನಸ್ಯಾತ್ಮನಃ ತಿರಸ್ಕರಣಾತ್. ವಿದ್ಯಮಾನಸ್ಯಾತ್ಮನೋ ಯತ್ಕಾರ್ಯಂ ಫಲಂ ಅಜರಾಮರತ್ವಾದಿ ಸಂವೇದನಲಕ್ಷಣಂ ತದ್ಧತಸ್ಯೇವ ತಿರೋಭೂತಂ ಭವತೀತಿ ಪ್ರಾಕೃತಾ ಅವಿದ್ವಾಂಸೋ ಜನಾ ಆತ್ಮಹನ ಉಚ್ಯಂತೇ. ತೇನ ಹ್ಯಾತ್ಮಹನನದೋಷೇಣ ಸಂಸರಂತಿ ತೇ.

–ಈ. ಉ. ಭಾ. 3

ಆತ್ಮಹಂತಕರು: ಅವರು ಯಾರು? ಅವರು ಅಜ್ಞಾನಿಗಳು. ಶಾಶ್ವತವಾದ ಆತ್ಮವನ್ನು ಅವರು ಹೇಗೆ ಕೊಲ್ಲಬಲ್ಲರು ? ಅವಿದ್ಯಾಪ್ರಭಾವಕ್ಕೆ ಒಳಗಾಗಿ ಶಾಶ್ವತವಾಗಿರುವ ಆತ್ಮವನ್ನು ತಿರಸ್ಕರಿಸುವುದರಿಂದ. ಆತ್ಮದ ಅಜರಾಮರತ್ವಾದಿ

ಸ್ವಭಾವವನ್ನು ತಿಳಿದಿರುವುದೇ, ವಿದ್ಯಮಾನವಾಗಿರುವ ಆತ್ಮದ ಲಕ್ಷಣ. ಅದು ಕೊಲ್ಲಲ್ಪಟ್ಟಂತೆ ತಿರೋಭೂತವಾಗಿರುತ್ತದೆ. ಆದುದರಿಂದ ಅವಿದ್ವಾಂಸರನ್ನು ಆತ್ಮಹಂತಕರು ಎಂದು ಕರೆಯುತ್ತಾರೆ. ಆತ್ಮವನ್ನು ಕೊಂದ ದೋಷದಿಂದ ಅವರು ದೇಹಾಂತರಪ್ರಾಪ್ತಿಗೊಳಗಾಗುತ್ತಾರೆ.

## 60. ವೈರಾಗ್ಯ ಮತ್ತು ಜ್ಞಾನ.

ಏನು ವಿರಕ್ತಸ್ಯ ಪ್ರತ್ಯಗಾತ್ಮವಿಷಯಂ ವಿಜ್ಞಾನಂ ಶ್ರೋತುಂ ಮನ್ತುಂ ವಿಜ್ಞಾತುಂ ಚ ಸಾಮರ್ಥ್ಯಮುಪಪದ್ಯತೇ, ನಾನ್ಯಥಾ. ಏತಸ್ಮಾಚ್ಚ ಪ್ರತ್ಯಗಾತ್ಮವಿಜ್ಞಾನಾತ್ ಸಂಸಾರಬೀಜಂ ಅಜ್ಞಾನಂ ಕಾಮಕರ್ಮ ಪ್ರವೃತ್ತಿಕಾರಣಂ ಅಶೇಷತೋ ನಿವರ್ತತೇ.

–ಕೇ. ಉ. ಪ. ಭಾ. ಭೂಮಿಕಾ

ವಿರಾಗಿಯಾದವನಿಗೆ ಮಾತ್ರ ಪ್ರತ್ಯಗಾತ್ಮ ವಿಷಯವನ್ನು ಕೇಳಲೂ ಮನನಮಾಡಲೂ ತಿಳಿಯಲೂ ಸಾಮರ್ಥ್ಯವು ಉಂಟಾಗುತ್ತದೆ. ಮತ್ತಾವಮಾರ್ಗದಿಂದಲೂ ಅಲ್ಲ. ಬ್ರಹ್ಮವಾದ ಪ್ರತ್ಯಗಾತ್ಮದ ಅರಿವಿನ ಮೂಲಕ ಕಾಮಕರ್ಮಪ್ರವೃತ್ತಿಗೆ ಕಾರಣವಾದ ಅಜ್ಞಾನವು ನಿಃಶೇಷವಾಗಿ ನಾಶ ಮಾಡಲ್ಪಡುತ್ತದೆ.

## 61. ಆಸೆಪಡಬಾರದು.

ಕಸ್ಯಸ್ವದ್ಧನಮ್? ನ ಕಸ್ಯಚಿದ್ಧನಮಸ್ತಿ ಯತ್ ಗೃಧ್ಯೇತ. ಆತ್ಮೈವೇದಂ ಸರ್ವಮಿತೀಶ್ವರಭಾವನಯಾ ಸರ್ವ ತ್ಯಕ್ತಂ, ಅತ ಆತ್ಮನ ಏವೇದಂ ಸರ್ವಂ ಆತ್ಮೈವ ಚ ಸರ್ವಮ್. ಅತೋ ಮಿಥ್ಯಾವಿಷಯಾಂ ಗೃಧಿಂ ಮಾಕಾರ್ಷೀಃ

–ಈ. ಉ. ಭಾ. 1

ಧನವು ಯಾರಿಗೆ ಸೇರಿದುದು? ಧನವು ಯಾರಿಗಾದರೂ ಸೇರಿದ್ದರೆ ಅದನ್ನು ಅಪೇಕ್ಷಿಸಬಹುದಾಗಿತ್ತು. 'ಇರುವುದೆಲ್ಲವೂ ಆತ್ಮವೇ' ಎಂಬ ಈಶ್ವರ ಭಾವನೆಯನ್ನು ಹೊಂದಿ ಸರ್ವವನ್ನೂ ಪರಿತ್ಯಜಿಸಲಾಗಿದೆ. ಆದುದರಿಂದ ಇವೆಲ್ಲವೂ ಆತ್ಮಕ್ಕೆ ಸೇರಿದುದು. ಸರ್ವಸ್ವವೂ ಆತ್ಮವೇ. ಆದುದರಿಂದ ಮಿಥ್ಯೆಯಾದ ವಸ್ತುಗಳನ್ನು ಅಪೇಕ್ಷಿಸಬೇಡಿ.

## 62. ಉಪಾಸನೆ.

ಉಪಾಸನಂ ನಾಮ ಯಾಥಾಶಾಸ್ತ್ರಂ ಉಪಾಸ್ಯಸ್ಯಾರ್ಥಸ್ಯ ವಿಷಯೀಕರಣೇನ ಸಾಮೀಪ್ಯಂ ಉಪಗಮ್ಯ ತೈಲಧಾರವತ್ ಸಮಾನಪ್ರತ್ಯಯಪ್ರವಾಹೇಣ ದೀರ್ಘಕಾಲಂ ಯತ್ ಆಸನಂ ತತ್ ಉಪಾಸನಮಾಚಕ್ಷತೇ.

–ಭ. ಗೀ. ಭಾ. xiii, 3

ಧ್ಯಾನದ ವಿಷಯವನ್ನು ಸಮೀಪಿಸಿ, ಎಣ್ಣೆಯು ಹರಿಯುವಂತೆ ಒಂದೇ ರೀತಿಯ ನಂಬಿಕೆಯನ್ನು ಮುಂದುವರಿಸುತ್ತಾ ಒಂದೇ ಎಡೆಯಲ್ಲಿ ಬಹುಕಾಲ ಇರುವುದಕ್ಕೆ 'ಉಪಾಸನಾ' ಎಂದು ಹೆಸರು.

## 63. ಧ್ಯಾನಮಾರ್ಗ.

ವಿವಿಕ್ತದೇಶ ಆಸೀನೋ ವಿರಾಗೋ ವಿಜಿತೇಂದ್ರಿಯಃ ।
ಭಾವಯೇದೇಕಮಾತ್ಮಾನಂ ತಮನನ್ತಮನನ್ಯಧೀಃ ॥

–ಆ. ಬೋ. 38

ಏಕಾಂತ ಪ್ರದೇಶದಲ್ಲಿ ಕುಳಿತು, ವೈರಾಗ್ಯದಿಂದ, ಇಂದ್ರಿಯಗಳನ್ನು ನಿಗ್ರಹಿಸಿ, ಮತ್ತಾವುದನ್ನೂ ಕುರಿತು ಯೋಚಿಸದೆ ಅನಂತವಾದ ಆತ್ಮವನ್ನು ಕುರಿತು ಭಾವಿಸಬೇಕು.

## 64. ಮೋಕ್ಷಸ್ವಭಾವ.

ರೂಪವರ್ಣಾದಿಕಂ ಸರ್ವಂ ವಿಹಾಯ ಪಾರಮಾರ್ಥಿವತ್ ।
ಪರಿಪೂರ್ಣಚಿದಾನಂದಸ್ವರೂಪೇಣಾವತಿಷ್ಠತೇ ॥

–ಆ.ಬೋ. 40

ರೂಪ, ಜಾತಿ ಮುಮತಾದುವೆಲ್ಲವನ್ನೂ ಬಿಟ್ಟು ಪರಮಾರ್ಥಿಯು ಪರಿಪೂರ್ಣ ಚಿದಾನಂದಸ್ವರೂಪದಲ್ಲಿ ಇರುತ್ತಾನೆ.

## 65. ತುರೀಯವೇ ಸತ್ಯ.

ಆತ್ಮತ್ವಾವಗಮೇ ಅನಾತ್ಮತೃಷ್ಣಾವ್ಯಾವೃತ್ತಿಹೇತುತ್ವಾತ್, ಶುಕ್ತಕಾವಗಮ ಇವ ರಜತತೃಷ್ಣಾಯಾಃ. ನ ಹಿ ತರೀಯಸ್ಯಾತ್ಮತ್ವಾವಗಮೇ ಸತಿ ಅವಿದ್ಯಾತೃಷ್ಣಾದಿದೋಷಾಣಾಂ ಸಂಭವೋಽಸ್ತಿ. ನ ಚ ತುರೀಯಸ್ಯಾತ್ಮತ್ವಾನವಗಮೇ ಮಾರಣಮಸ್ತಿ. ಸರ್ವೋಪನಿಷದಾಂ ತಾದಾರ್ಥ್ಯೇನೋಪಕ್ಷಯಾತ್.

– ಮಾ. ಉ. ಭಾ. i, 7

ತುರೀಯವಾದುದು ಆತ್ಮವೆಂದು ತಿಳಿದಾಗ ಅನಾತ್ಮ ತೃಷ್ಣೆಯು ನಾಶವಾಗುತ್ತದೆ; ಮುತ್ತಿನ ಚಿಪ್ಪನ್ನು ಕಂಡಾಗ ರಜತ ತೃಷ್ಣೆಯು ನಾಶವಾಗುವಂತೆ. ತುರೀಯವೇ ಆತ್ಮವೆಂದು ಅರಿವಾದಾಗ ಅವಿದ್ಯೆ ತೃಷ್ಣೆ ಮುಂತಾದ ದೋಷಗಳು ಇರುವುದು ಸಾಧ್ಯವೇ ಅಲ್ಲ. ತರೀಯವೇ ಆತ್ಮವೆಂದು ತಿಳಿಯದಿರುವುದಕ್ಕೆ ಕಾರಣಗಳೂ ಇಲ್ಲ, ಏಕೆಂದರೆ ಎಲ್ಲ ಉಪನಿಷತ್ತುಗಳ ತಾತ್ಪರ್ಯವೇ ಅದು.

## 66. ಬ್ರಹ್ಮಸಾಕ್ಷಾತ್ಕಾರ.

ನಿಗೃಹೀತಂ ಚಿತ್ತಂ ಯದಾ ಸುಷುಪ್ತೇ ನ ಲೀಯತೇ, ನ ಚ ಪುನರ್ವಿಷಯೇಷು ವಿಕ್ಷಿಪ್ಯತೇ, ಅನಿಂಗ್ನಂ ಅಚಲಂ ನಿವಾತಪ್ರದೀಪಕಲ್ಪಂ, ಅನಾಭಾಸಂ, ನ ಕೇನಚಿತ್ಕಲ್ಪಿತೇನ ವಿಷಯಭಾವೇನಾವಭಾಸತೇ ಇತಿ, ಯದಾ ಏವಂ ಲಕ್ಷಣಂ ಚಿತ್ತಂ, ತದಾ ನಿಷ್ಪನ್ನಂ ಬ್ರಹ್ಮ, ಬ್ರಹ್ಮಸ್ವರೂಪೇಣ ನಿಷ್ಪನ್ನಂ ಚಿತ್ತಂ ಭವತೀತ್ಯರ್ಥಃ

–ಮಾ. ಕಾ. ಭಾ. iii, 46

ನಿಗ್ರಹಹೊಂದಿದ ಮನಸ್ಸು ಯಾವಾಗ ನಿದ್ದೆಯಲ್ಲಿ ಲೀನವಾಗುವುದಿಲ್ಲವೋ ಅಥವಾ ವಿಷಯಾಪೇಕ್ಷೆಯಲ್ಲಿ ಮತ್ತೆ ವಿಕ್ಷೇಪಗೊಳ್ಳುವುದಿಲ್ಲವೋ ಯಾವಾಗ ಅದು ಗಾಳಿಬಿಸದ ಕಡೆಯಲ್ಲಿಟ್ಟ ದೀಪದ ಕುಡಿಯಂತೆ ಅಚಲವಾಗುತ್ತದೋ ಅದು ಕಲ್ಪಿತವಾದ ವಿಷಯದ ಆಭಾಸವಾಗಿ ಕಾಣುವುದಿಲ್ಲವೋ ಯಾವಾಗ ಮನಸ್ಸು ಇಂಥ ಲಕ್ಷಣವನ್ನು ಹೊಂದಿರುತ್ತದೋ ಆಗ ಅದು ಬ್ರಹ್ಮಸ್ವರೂಪದಲ್ಲಿ ಲೀನವಾಗುತ್ತದೆ ಎಂದರ್ಥ.

## 67. ವೀರ್ಯವು ಜ್ಞಾನದಿಂದುಂಟಾಗುತ್ತದೆ.

ಅವಿದ್ಯಾಜಂ ಹಿ ವೀರ್ಯಂ ವಿನಾಶಿ. ವಿದಯಾ ಅವಿದ್ಯಾಯಾಬಾಧ್ಯತ್ವಾತ್. ನ ತು ವಿದ್ಯಾಯಾ ಬಾಧಕೋಸ್ತೀತಿ ವಿದ್ಯಾಜಮಮೃತಂ ವೀರ್ಯಂ. ಅತೋ ವಿದ್ಯಾ ಅಮೃತತ್ವೇ ನಿಮಿತ್ತಮಾತ್ರಂ ಭವತಿ. "ನಾಯಮಾತ್ಮಾ ಬಲಹೀನೇನ ಲಭ್ಯಃ ಇತಿ ಚಾಥರ್ವಣೇ. ಲೋಕೇಽಪಿ ವಿದ್ಯಜಮೇವ ಬಲಮಭಿಭವತಿ ನ. ಶರೀರಾದಿಸಾಮರ್ಥ್ಯಂ ಯಥಾಹಸ್ತ್ಯಾದೇಃ

–ಕೇ. ಉ. ವಾ. ಭಾ. ii, 4

ಅವಿದ್ಯೆಯಿಂದುತ್ಪನ್ನವಾದ ವೀರ್ಯವು ವಿನಾಶಹೊಂದುತ್ತದೆ, ಏಕೆಂದರೆ ಜ್ಞಾನವು ಅವಿದ್ಯೆಯನ್ನು ನಾಶಮಾಡುತ್ತೆ. ಆದರೆ ಜ್ಞಾನವನ್ನು ನಾಶಪಡಿಸುವುದು ಯಾವುದೂ ಇಲ್ಲ. ಆದುದರಿಂದ ಜ್ಞಾನಜನ್ಯವಾದ ವೀರ್ಯವು ಶಾಶ್ವತವಾದುದು. ಹೀಗೆ ಜ್ಞಾನವು ಶಾಶ್ವತತೆಯ ಏಕೈಕ ಸಾಧನವಾಗುತ್ತದೆ. ಅಥರ್ವಣಶ್ರುತಿ (ಮುಂಡಕ) ಯಲ್ಲಿ "ಬಲಹೀನನಿಂದ ಆತ್ಮವನ್ನು ಗಳಿಸಲಾಗುವುದಿಲ್ಲ" ಎಂಬ ವಾಣಿಯಿದೆ.

ಲೋಕದಲ್ಲಿ ಕೂಡ ದೈಹಿಕವಾದ ಸಾಮರ್ಥ್ಯವನ್ನು ಜ್ಞಾನದಿಂದ ಬಂದ ಶಕ್ತಿಯು ಸೋಲಿಸಿಬಿಡುತ್ತದೆ. ಉದಾಹರಣೆಗೆ ಆನೆ ಮುಂತಾದ ಪ್ರಾಣಿಗಳ ನಿದರ್ಶನದಲ್ಲಿ ಅವು ಮಾನವನಿಂದ ಅಧೀನಗೊಳಿಸಲ್ಪಟ್ಟಿರುವುದು ಕಂಡುಬರುತ್ತದೆ.

## 68. ಮೋಕ್ಷ–ಸ್ವಾತಂತ್ರ್ಯ.

ಶಾಸ್ತ್ರಾಚಾರ್ಯೋಪದೇಶಮನ್ವಬೋಧ ಆತ್ಮಸತ್ಯಾನುಬೋಧಃ. ತೇನ ಸಂಕಲ್ಪಾಭಾವಾನ್ನ ಸಂಕಲ್ಪ್ಯತೇ ದಾಹ್ಯಾಭಾವೇ ಜ್ವಲನಮಿವಾಗ್ನೇಃ ಯದಾ ಯಸ್ಮಿನ್ ಕಾಲೇ, ತದಾ ತಸ್ಮಿನ್ ಕಾಲೇ ಅಮನಸ್ತಾಂ ಅಮನೋಭಾವಂ ಯಾತಿ.

–ಮಾ. ಕಾ. ಭಾ. iii,32

ಆಚಾರ್ಯರ ಬೋಧಯಿಂದಲೂ ಶಾಸ್ತ್ರಗಳಿಂದಲೂ ಆತ್ಮಸತ್ಯದ ಅರಿವುಂಟಾಗುತ್ತದೆ. ತನ್ಮೂಲಕ ಮನಸ್ಸು ಭ್ರಮೆಯಿಂದ ಸ್ವತಂತ್ರವಾಗುತ್ತದೆ. ಅಂದರೆ, ಇಂಧನವಿಲ್ಲದೆ ಅಗ್ನಿಯು ಉರಿಯಲಾರದಂತೆ ಅದನ್ನು ಕಲ್ಪನೆ ಮಾಡಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಯಾವ ಸಮಯದಲ್ಲಿ ಇದು ಸಾಧ್ಯವಾಗುತ್ತದೆಯೋ ಆ ಸಮಯದಲ್ಲಿಯೇ ಮನಸ್ಸು ಆ ಮನೋಭಾವವನ್ನು ಪಡೆಯುತ್ತದೆ.

## 69. ಜ್ಞಾನಸಾಧನೆ.

ಅಲಬ್ಧಾವರಣಾಃ; ಅಲಬ್ಧಂ ಅಪ್ರಾಪ್ತಮಾವರಣಂ ಅವಿದ್ಯಾದಿಬಂಧನಂ ಯೇಷಾಂ ತೇ ಧರ್ಮಾಂ ಅಲಬ್ಧಾವರಣಾಃ ಬಂಧನರಹಿತಾ ಇತ್ಯರ್ಥಃ. ಪ್ರಕೃತಿನಿರ್ಮಲಾಃ ಸ್ವಭಾವಶುದ್ಧಾಃ ಆದೌ ಬುದ್ಧಾಃ ತಥಾ ಮುಕ್ತಾಃ, ಯಸ್ಮಾನ್ ನಿತ್ಯಶುದ್ಧಬುದ್ಧಮುಕ್ತಸ್ವಭಾವಾಃ. ಯದ್ಯೇವಂ ಕಥಂ ತರ್ಹಿ ಬುಧ್ಯಂತ ಇತ್ಯುಚ್ಯತೇ – ನಾಯಕಾಃ ಸ್ವಾಮಿನಃ ಸಮರ್ಥಾಃ ಬೋದ್ಧುಂ ಬೋಧಶಕ್ತಮತ್ಸ್ವಭಾವಾ ಇತ್ಯರ್ಥಃ. ಯಥಾ ನಿತ್ಯಪ್ರಕಾಶಸ್ವರೂಪೋಽಪಿ ಸನ್ ಸವಿತಾ ಪ್ರಕಾಶತ ಇತ್ಯುಚ್ಯತೇ, ಯಥಾ ವಾ ನಿತ್ಯನಿವೃತ್ತಗತಯೋಽಪಿ ನಿತ್ಯಮೇವ ಶೈಲಾಃ ತಿಷ್ಠಂತೀತ್ಯುಚ್ಯತೇ, ತದ್ವತ್.

–ಮಾ. ಕಾ. ಭಾ. iv, 98

ಜೀವಾತ್ಮಗಳು ಯಾವಾಗಲೂ ಅವಿದ್ಯೆಯಿಂದಾದ ಬಂಧನದ ಆವರಣವನ್ನು ಹೊಂದಿರುವುದಿಲ್ಲ. ಅವು ಯಾವಾಗಲೂ ಬಂಧನದಿಂದ ಮುಕ್ತವಾಗಿರುತ್ತವೆ. ಸ್ವಭಾವತಃ ಅವು ಶುದ್ಧವಾದುವು ನಿರ್ಮಲ ಪ್ರಕೃತಿಯುಳ್ಳವು. ಆದಿಯಿಂದಲೂ ಸ್ವತಂತ್ರವಾದುವು, ಬುದ್ಧವಾದವು. ಆದುದರಿಂದ ಅವು ನಿತ್ಯಶುದ್ಧ ಬುದ್ಧಮುಕ್ತ ಸ್ವಭಾವವುಳ್ಳವು. "ಹಾಗದರೆ ತಿಳಿದರುವವರಾದ ಆಚಾರ್ಯರು ತಾವು ಮುಕ್ತರೆಂದು ಏಕೆ ಹೇಳುತ್ತಾರೆ ?" ಉತ್ತರವು ಹೀಗಿದೆ: ಸೂರ್ಯನು ಪ್ರಕಾಶವಾಗಿರುವುದೇ ಸ್ವಭಾವವುಳ್ಳವನಾದರೂ ಪ್ರಕಾಶಿಸುತ್ತಾನೆ ಎಂದು ಹೇಳುವಂತೆ, ಬೆಟ್ಟಗಳು ಯಾವಾಗಲೂ ಚಲನೆಯಿಲ್ಲದವುಗಳಾದರೂ, ಅವು ನಿಂತಿವೆ ಎಂದು ಹೇಳುವಂತೆ ಇಲ್ಲಿಯೂ ಅನ್ವಯ.

## 70. ಸಮ್ಯಗ್ದರ್ಶನ.

ತದೇತತ್ಸಮ್ಯಗ್ದರ್ಶನಂ ಸ್ತೂಯತೇ – ವಿಗತರಾಗಭಯಕ್ರೋಧಾದಿಸರ್ವದೋಷೈಃ ಸರ್ವದಾ ಮುನಿಭಿಃ ಮನನಶೀಲೈಃ ವಿವೇಕಿಭಿಃ ವೇದಪಾರಗೈಃ ಅವಗತವೇದಾಂತಾರ್ಥತತ್ತ್ವೈಃ ಜ್ಞಾನಿಭಿಃ ನಿರ್ವಿಕಲ್ಪಃ ಸರ್ವವಿಕಲ್ಪಶೂನ್ಯಃ ಅಯಮಾತ್ಮಾ ದೃಷ್ಟಃ ಉಪಲಬ್ಧೋ ವೇದಾಂತತಾರ್ಥತತ್ಪರೈಃ.......ವಿಗತದೋಷೈರೇವ ಪಂಡಿತೈರ್ವೇದಾಂತಾರ್ಥ ತತ್ಪರೈಃ ಸನ್ಯಾಸಿಭಿಃ ಅಯಮಾತ್ಮಾ ದ್ರಷ್ಟುಂ ಶಕ್ಯಃ, ನಾನ್ಯೈಃ ರಾಗಾದಿಕಲುಷಿತಚೇತೋಭಿಃ ಸ್ವಪಕ್ಷಪಾತಿದರ್ಶನೈಃ ತಾರ್ಕಿಕಾದಿಭಿಃ.

–ಮಾ. ಕಾ. ಭಾ. ii, 35

ಸಮ್ಯಗ್ದರ್ಶನವನ್ನು ಹೀಗೆ ಸ್ತುತಿಸಿದ್ದಾರೆ: ರಾಗ, ಭಯ, ಕ್ರೋಧ ಮುಂತಾದ ದೋಷ ವಿಮುಕ್ತರಾದ, ಧ್ಯಾನಶೀಲರಾದ,ವಿವೇಕಿಗಳಾದ, ವೇದಗಳನ್ನು ಅರ್ಥಮಾಡಿಕೊಂಡಿರುವ, ವೇದಾಂತಾರ್ಥವನ್ನು ಅರಿತುಕೊಂಡಿರುವ ಅಂದರೆ ವೇದಾಂತಾರ್ಥವನ್ನು ತಿಳಿದು ಅದರಲ್ಲಿ ದೃಢವಾದ ಶ್ರದ್ಧೆಯುಳ್ಳ ಜ್ಞಾನಿಗಳಾದ ಮುನಿಗಳಿಂದ ನಿರ್ವಿಕಲ್ಪವೂ ಸರ್ವವಿಕಲ್ಪ ಶೂನ್ಯವೂ ಆದ ಈ ಆತ್ಮವು ಕಾಣಲ್ಪಟ್ಟಿದೆ. ಎಲ್ಲ ದೋಷಗಳಿಂದ ದೂರರಾದ, ವೇದಾಂತಸತ್ಯದಲ್ಲಿ ಗಾಢವಾದ ಶ್ರದ್ಧೆಯುಳ್ಳ ಸಂನ್ಯಾಸಿಗಳಿಂದ ಮಾತ್ರ ಈ ಆತ್ಮವು

ಕಾಣಲ್ಪಡುತ್ತದೆ; ರಾಗಾದಿಗಳಿಂದ ಕಲುಷಿತವಾದ ಮನಸ್ಸುಳ್ಳ ತಮ್ಮ ಪಕ್ಷಕ್ಕೇ ಅಂಟಿಕೊಳ್ಳುವ ತಾರ್ಕಿಕರಿಂದ ಅದನ್ನು ಅರಿಯಲು ಅಸಾಧ್ಯ.

## 71. ಮೋಕ್ಷಸಿದ್ಧಿ.

ವಿದುಷ್‌ತ್ಯಕ್ತೈಷಣಸ್ಯ ಸ್ಥಿತಪ್ರಜ್ಞಸ್ಯ ಯತೇರೇವ ಮೋಕ್ಷಪ್ರಾಪ್ತಿಃ, ನಾ ತು ಅಸಂನ್ಯಾಸಿನಃ ಕಾಮಕಾಮಿನಃ.

–ಭ. ಗೀ. ಭಾ. ii, 70

ಮೋಕ್ಷವೆನ್ನುವುದು ವಿದ್ವಾಂಸನಾದ ಆಸೆಗಳನ್ನೆಲ್ಲ ತ್ಯಜಿಸಿದ ಸ್ಥಿತಪ್ರಜ್ಞನಿಗೆ ಪ್ರಾಪ್ತಿಯಾಗುತ್ತದೆ; ವೈರಾಗ್ಯವಿಲ್ಲದ, ಆಸೆಗಳುಳ್ಳವರಿಗೆ ಲಭಿಸುವುದಿಲ್ಲ.

## 72. ಶ್ರೇಷ್ಠ ಜ್ಞಾನಿಗಳು.

ಅಜೇ ಸಾಮ್ಯೇ ಪರಮಾರ್ಥತತ್ತ್ವೇ ಏವಮೇವೇತಿ ಯೇ ಕೇಚಿತ್ ಸ್ತ್ರೀದಯೋಽಪಿ ಸುನಿಶ್ಚಿತಾ ಭವಿಷ್ಯಂತಿ ಚೇತ್. ತ ಏವ ಹಿ ಲೋಕೇ ಮಹಾಜ್ಞಾನಾಃ ನಿರತಿಶಯತತ್ತ್ವವಿಷಯಜ್ಞನಾ ಇತ್ಯರ್ಥಃ. ತಚ್ಚ ತೇಷಾಂ ವರ್ತ್ಮ ತೇಷಾಂವಿದಿತಂ ಪರಮಾರ್ಥತತ್ತ್ವಂ ಸಾಮಾನ್ಯಬುದ್ಧಿಃ ಅನ್ಯೋ ಲೋಕಃ ನ ಗಾಹತೇ, ನಾವತರತಿ ನ ವಿಷಯೀಕರೋತೀತ್ಯರ್ಥಃ

–ಮಾ. ಕಾ. ಭಾ. iv, 95

ಏಕವಾದ ಪರಮಾರ್ಥತತ್ತ್ವದಲ್ಲಿ ಹೀಗೆ ಸಂಪೂರ್ಣ ನಂಬಿಕೆಯನ್ನು ಪಡೆಯುವವರು, ಸ್ತ್ರೀಯರೂ ಕೂಡ ಈ ಪ್ರಪಂಚದಲ್ಲಿ ಮಹಾಜ್ಞಾನಿಗಳು. ನಿರತಿಶಯವಾದ ತತ್ತ್ವದ ಜ್ಞಾನವನ್ನು ಪಡೆದವರು. ಸಾಮಾನ್ಯರಾದ ಲೋಕದ ಜನರು ಈ ಜ್ಞಾನಿಗಳ ಮಾರ್ಗವನ್ನಾಗಲಿ ಅವರು ಕಂಡ ಪಾರಮಾರ್ಥ ತತ್ತ್ವವನ್ನಾಗಲಿ ಅರ್ಥಮಾಡಿಕೊಳ್ಳಲಾರರು.

## 73. ದ್ವೈತಕ್ಕೆ ಹಿಂದಿರುಗಬೇಕಾಗಿಲ್ಲ.

ನ ಹಿ ಬ್ರಹ್ಮೈಕತ್ವ ವಿಜ್ಞಾನೇನೋನ್ಮಥಿತಸ್ಯ ದ್ವೈತವಿಜ್ಞಾನಸ್ಯ ಪುನಃ ಸಂಭವೋಽಸ್ತಿ.

–ಬ್ರ. ಸೂ. ಭಾ. I, i, 4

ಬ್ರಹ್ಮೈಕತ್ವದಜ್ಞಾನದಿಂದ ವಿನಾಶವಾದ ದ್ವೈತವಿಜ್ಞಾನವು ಮತ್ತೆ ಸಂಭವಿಸುವುದು ಸಾಧ್ಯವಿಲ್ಲ.

## 74. ಸಂಪೂರ್ಣ ಕೃತಕೃತ್ಯತೆ.

ಅಲಂಕಾರೋ ಹಯಸ್ಮಾಕಂ ಯದ್ಬ್ರಹ್ಮಾತ್ಮಾವಗತೋ ಸತ್ಯಾಂ ಸರ್ವಕರ್ತವ್ಯತಾಹಾನಿಃ. ಕೃತಕೃತ್ಯತಾ ಚ

–ಬ್ರ. ಸೂ. ಭಾ. I, i, 4

ಇದು ನಮಗೆ ಭೂಷಣ. ಬ್ರಹ್ಮಜ್ಞಾನ ಉಂಟಾದಾಗ ಎಲ್ಲ ಕರ್ತವ್ಯ ಬುದ್ಧಿಯೂ ನಾಶವಾಗುತ್ತದೆ, ಪೂರ್ಣಕೃತಕೃತ್ಯತೆಯ ತೃಪ್ತಿಯಿರುತ್ತದೆ.

## 75. ಇಹದಲ್ಲಿಯೇ ಆತ್ಮಜ್ಞಾನ.

ಇಹ ಮನುಷ್ಯಜನ್ಮನಿ ಸತಿ, ಅವಶ್ಯಮಾತ್ಮಾ ವೇದಿತವ್ಯ ಇತ್ಯೇತದ್ವಿಧೀಯತೇ. ಕಥಮ್? ಇಹ ಚೇದವೇದೀದ್ವಿದಿತಾನ್, ಅಥ ಸತ್ಯಂ ಪರಮಾರ್ಥತತ್ವಮಸ್ತಿ ಅವಾಪ್ತಮ್. ತಸ್ಯ ಜನ್ಮ ಸಫಲಮಿತ್ಯಭಿಪ್ರಾಯಃ. ನ ಚೇದಿಹಾವೇದೀನ್ನ ವಿದಿತವಾನ್, ವೃಥೈವ ಜನ್ಮ. ಅಪಿ ಚ ಮಹತೀ ವಿನಷ್ಟಿಃ ಮಹಾನ್ ವಿನಾಶೋ ಜನ್ಮಮರಣಪ್ರಬಂಧಾವಿಚ್ಛೇದಪ್ರಾಪ್ತಿಲಕ್ಷಣಃ ಸ್ಯಾದ್ಯತಃ ತಸ್ಮಾದವಶ್ಯಂ ತದ್ವಿಚ್ಛೇದಾಯಜ್ಞೇಯ ಆತ್ಮಾ.

–ಕೇ. ಉ. ವಾ. ಭಾ. ii, 5

ಇಲ್ಲಿ, ಈ ಮಾನವದೇಹದಲ್ಲಿ ಆತ್ಮವನ್ನು ಅಗತ್ಯವಾಗಿ ಅರಿಯಬೇಕು. ಹೀಗೆ ವಿಧಿಸಿದ್ದಾರೆ. ಹೇಗೆ ? ಇಲ್ಲಿ ಆತ್ಮವನ್ನು ಅರಿತರೆ ಪರಮಾರ್ಥತತ್ವವನ್ನು ಸಾಧಿಸಿದಂತಾಗುತ್ತದೆ. ಅವನ ಜನ್ಮ ಸಫಲವಾಗುತ್ತದೆಂದೇ ಅಭಿಪ್ರಾಯ. ಇಲ್ಲಿ ಬ್ರಹ್ಮನನ್ನು ಅರಿಯದೆಹೋದರೆ ಅವನ ಜನ್ಮ ವ್ಯರ್ಥ. ಅದು ತುಂಬ ವಿನಾಶಕಾರಕವಾಗುತ್ತದೆ. ಏಕೆಂದರೆ ಹುಟ್ಟುಸಾವುಗಳ ಕೊನೆಯಿಲ್ಲದ ವೃತ್ತದಲ್ಲಿ ಸಿಕ್ಕಿಕೊಳ್ಳಬೇಕಾಗುತ್ತದೆ. ಅದನ್ನು ಕತ್ತರಿಸಲು ಆತ್ಮವನ್ನು ಅವಶ್ಯವಾಗಿ ಅರಿಯಬೇಕು.

## 76. ಸತತವಾಗಿ ಪ್ರಾಪ್ತವಾಗಿರುವುದನ್ನು ಪ್ರಾಪ್ಯಮಾಡಿಕೊಳ್ಳಬೇಕು.

ಆತ್ಮಾ ತು ಸತತಂ ಪ್ರಾಪ್ತೋಽಪ್ಯಪ್ರಾಪ್ತವದವಿದ್ಯಯಾ ।
ತನ್ನಾಶೇ ಪ್ರಾಪ್ತವದಭಾತಿ ಸ್ವಕಂಠಾಭರಣಂ ಯಾಥಾ ॥

–ಆ, ಬೋ. 44

ಆತ್ಮವು ಯಾವಾಗಲೂ ಪ್ರಾಪ್ತವಾಗಿದ್ದರೂ ಅಪ್ರಾಪ್ತವಾಗಿದ್ದ ಹಾಗೆಯೇ ಅವಿದ್ಯೆಯಿಂದ ಕಾಣುತ್ತದೆ. ಅವಿದ್ಯೆಯನ್ನು ನಾಶಮಾಡಿದರೆ ಅದು ಸಾಧಿತವಾದಂತೆ ಪ್ರಕಾಶಕ್ಕೆ ಬರುತ್ತದೆ–ಸ್ವಂತ ಕೊಳಸುತ್ತ ಇರುವ ಕಂಠಾಭರಣದ ಹಾಗೆ.

## 77. ಜೀವನ್ಮುಕ್ತಿ.

ಜೀವನ್ಮುಕ್ತಿಸ್ತು ತದ್ವಿದ್ವಾನ್ಪೂರ್ವೋಪಾಧಿಗುಣಾಂಸ್ತ್ಯಜೇತ್ ।
ಸ ಸಚ್ಚಿದಾದಿಧರ್ಮತ್ವಂ ಭೇಜೇ ಭ್ರಮರಕೀಟವತ್ ॥

–ಆ. ಬೋ. 49

ಯಾವಾಗ ವಿದ್ವಾಂಸನಾದವನು ಪೂರ್ವೋಪಾಧಿಗುಣಗಳನ್ನು ಬಿಟ್ಟು ಭ್ರಮರಕೀಟನ್ಯಾಯದಿಂದ ಸಚ್ಚಿತ್‌ಧರ್ಮವನ್ನು ಪಡೆಯುತ್ತಾನೋ ಅದೇ ಜೀವನ್ಮುಕ್ತಿ.

## 78. ವಿದ್ವಾಂಸನು ಅಶರೀರಿ.

ತಸ್ಮಾತ್ ಮಿಥ್ಯಾಪ್ರತ್ಯಯನಿಮಿತ್ತತ್ವಾತ್ ಸಶರೀರತ್ವಸ್ಯ, ಸಿದ್ಧಂ ಜೀವತೋಽಪಿ ವಿದುಷಃ ಅಶರೀರತ್ವಂ....... ನ ಅವಗತಬ್ರಹ್ಮಾತ್ಮಭಾವಸ್ಯ ಯಥಾಪೂರ್ವಂ ಸಂಸಾರಿತ್ವಂ.

-ಬ್ರ. ಸೂ. ಭಾ. I, i, 4

ನಾವು ಸಶರೀರಗಳೆಂಬುದು ಮಿಥ್ಯಾಜ್ಞಾನದಿಂದುಂಟಾದುದು. ಆದುದರಿಂದ ಜ್ಞಾನಿಗಳಿಗೆ ಅವರು ಬದುಕಿದ್ದಾಗಲೂ ಶರೀರವಿಲ್ಲವೆಂಬುದು ಸಿದ್ಧವಾದುದು... ಬ್ರಹ್ಮಜ್ಞಾನವುಳ್ಳವರಿಗೆ ಹಿಂದಿನಂತೆ ಸಂಸಾರಚಕ್ರದ ತೊಳಲಾಟವಿಲ್ಲ.

## 79. ಬ್ರಹ್ಮಭಾವ.

ಬ್ರಹ್ಮಭಾವಶ್ಚ ಮೋಕ್ಷಃ.... ಅನಾಧೇಯಾತಿಶಯಸ್ವರೂಪತ್ವಾನ್ಮೋಕ್ಷಸ್ಯ...... ನಿತ್ಯಶುದ್ಧಬುದ್ಧಮುಕ್ತಸ್ವರೂಪತ್ವಾತ್ ಮೋಕ್ಷಸ್ಯ.

–ಬ್ರ. ಸೂ. ಭಾ. I, i, 4

ಬ್ರಹ್ಮಭಾವವೇ ಮೋಕ್ಷ. ಯಾವುದಕ್ಕೆ ಏನನ್ನೂ ಸೇರಿಸುವುದು ಸಾಧ್ಯವಿಲ್ಲವೋ ಅಂಥ ಬ್ರಹ್ಮಸ್ವರೂಪವೇ ಮೋಕ್ಷ. ಮೋಕ್ಷವು ನಿತ್ಯಶುದ್ಧ ಬುದ್ಧ ಮುಕ್ತಸ್ವರೂಪವಾದುದು.

## 80. ಜ್ಞಾನ ಫಲ.

ತಸ್ಯ ಏತತ್ಫಲಮಾಹ–ಅಪಹತ್ಯ ಪಾಪ್ಮಾನಂ ಅಪಕ್ಷಯ್ಯ ಧರ್ಮಾಧರ್ಮಾವಿತ್ಯರ್ಥಃ ಅನಂತೇ ಅಪಾರೇ ಅವಿದ್ಯಮಾನಾನ್ತೇ ಸ್ವರ್ಗಲೋಕೇ ಸುಖಪ್ರಾಯೇ ನಿರ್ದುಃಖಾತ್ಮಾನಿ ಪರೇ ಬ್ರಹ್ಮಣಿ ಜ್ಯೇಯೇ ಮಹತಿ ಸರ್ವಮಹತ್ತರೇ ಪ್ರತಿತಿಷ್ಠತಿ, ಸರ್ವವೇದಾಂತವೇದ್ಯಂ ಬ್ರಹ್ಮ ಆತ್ಮತ್ವೇನಾವಗಮ್ಯ ತದೇವ ಬ್ರಹ್ಮ ಪ್ರತಿಪದ್ಯತ ಇತ್ಯರ್ಥ:

–ಕೇ. ಉ. ವಾ. ಭಾ. iv, 9

ಇದು ಜ್ಞಾನಫಲ: ಪಾಪಹರಣ ಅಂದರೆ ಧರ್ಮಾಧರ್ಮಗಳನ್ನು ನಾಶಗೊಳಿಸಿ ಅನಂತವಾದ ಸ್ವರ್ಗಪ್ರಾಯವಾದ ಪರಮಬ್ರಹ್ಮನಲ್ಲಿ ಪ್ರತಿಷ್ಠಿತನಾಗುತ್ತಾನೆ. ನಿರ್ದುಃಖವಾದ ಸುಖ, ಸರ್ವಮಹತ್ತರವಾದ ಸತ್ಯ ಅವು ಅಲ್ಲಿರುತ್ತವೆ. ಸರ್ವವೇದಾಂತವೇದ್ಯವಾದ ಆತ್ಮವಾದ ಬ್ರಹ್ಮವನ್ನು ಅರಿತು ಆ ಬ್ರಹ್ಮವನ್ನೇ ಪಡೆಯುತ್ತಾನೆ. ಇದೇ ಅರ್ಥ.

---

Laser typeset at Saravu Graphic Impressions, New Delhi and
Printed at M/s Sona Printers, New Delhi